**3. ಕರ್ನಾಟಕ ಗೆಜೆಟೆಡ್ ಪ್ರೊಬೇಷನರರ ನೇಮಕಾತಿ (ಸ್ಪರ್ಧಾತ್ಮಕ ಪರೀಕ್ಷೆಗಳ ಮೂಲಕ ವರ್ಗ–I ಮತ್ತು II ಹುದ್ದೆಗಳಿಗೆ ನೇಮಕ) ನಿಯಮಗಳು, 1966ರ ತಿದ್ದುಪಡಿ.–** ಕರ್ನಾಟಕ ಗೆಜೆಟೆಡ್ ಪ್ರೋಬೇಷನರರ ನೇಮಕಾತಿ (ಸ್ಪರ್ಧಾತ್ಮಕ ಪರೀಕ್ಷೆಗಳ ಮೂಲಕ ವರ್ಗ–I ಮತ್ತು II ಹುದ್ದೆಗಳಿಗೆ ನೇಮಕ) ನಿಯಮಗಳು, 1966 (ಇಲ್ಲಿ ಇನ್ನು ಮುಂದೆ ಮೂಲ ನಿಯಮಗಳೆಂದು ಉಲ್ಲೇಖಿಸಲಾಗಿದೆ) ಇದರಲ್ಲಿ,–

(1) ಶೀರ್ಷಿಕೆಯಲ್ಲಿ, "ವರ್ಗ–I ಮತ್ತು II ಹುದ್ದೆಗಳು" ಎಂಬ ಪದಗಳನ್ನು ಮತ್ತು ಅಂಕಿಗಳನ್ನು ಬಿಟ್ಟುಬಿಡತಕ್ಕದ್ದು;

(2) 3ನೇ ನಿಯಮದ (1)ನೇ ಉಪನಿಯಮದಲ್ಲಿ "ವರ್ಗ–I ಮತ್ತು II" ಎಂಬ ಪದಗಳನ್ನು ಮತ್ತು ಅಂಕಿಗಳನ್ನು ಬಿಟ್ಟುಬಿಡತಕ್ಕದ್ದು.

(3) ಅನುಸೂಚಿ I ರಲ್ಲಿ:–

(i) "ಕೇಡರ್ ಮತ್ತು ವರ್ಗ" ಎಂಬ ಪದಗಳ ಬದಲಾಗಿ "ಕೇಡರ್" ಎಂಬ ಪದವನ್ನು ಸೇರಿಸತಕ್ಕದ್ದು;

(ii) ಪ್ರವರ್ಗ–Iರ ಅಡಿಯಲ್ಲಿರುವ ನಮೂದುಗಳಲ್ಲಿ ಕ್ರಮಸಂಖ್ಯೆ 6ರ ಮತ್ತು ಅದಕ್ಕೆ ಸಂಬಂಧಿಸಿದ ನಮೂದುಗಳ ನಂತರ ಈ ಮುಂದಿನ ನಮೂದುಗಳನ್ನು ಸೇರಿಸತಕ್ಕದ್ದು, ಎಂದರೆ:–

| | | | |
|---|---|---|---|
| "7 | ಕರ್ನಾಟಕ ಪೊಲೀಸ್ ಸೇವೆ | ಪೊಲೀಸ್ ಡೆಪ್ಯುಟಿ ಸೂಪರಿಂಟೆಂಡೆಂಟ್ | 2 ವರ್ಷಗಳು" |

(iii) ಪ್ರವರ್ಗ–II ರ ಅಡಿಯಲ್ಲಿರುವ ನಮೂದುಗಳಲ್ಲಿ ಕ್ರಮಸಂಖ್ಯೆ 10ನ್ನು ಮತ್ತು ಅದಕ್ಕೆ ಸಂಬಂಧಿಸಿದ ನಮೂದುಗಳನ್ನು ಬಿಟ್ಟುಬಿಡತಕ್ಕದ್ದು;"

(4) ಅನುಸೂಚಿ–II ರಲ್ಲಿ ಭಾಗ–III ಉಪಶೀರ್ಷಿಕೆಯ ಕೆಳಗೆ "ವರ್ಗ–Iರ ಸೇವೆಗಳಿಗೆ (ಪ್ರವರ್ಗ–I)" ಎಂಬ ಪದಗಳು, ಅಂಕಿಗಳು ಮತ್ತು ಆವರಣಗಳ ಬದಲಾಗಿ "ಪ್ರವರ್ಗ –Iಕ್ಕೆ" ಎಂಬ ಪದಗಳನ್ನು ಮತ್ತು ಅಂಕಿಗಳನ್ನು ಸೇರಿಸತಕ್ಕದ್ದು ; ಮತ್ತು

(5) ಅನುಬಂಧ– I ರಲ್ಲಿ ಭಾಗ– IIIರ ಶೀರ್ಷಿಕೆಯಲ್ಲಿ "ವರ್ಗ I ಸೇವೆಗಳು" ಎಂಬ ಪದಗಳನ್ನು ಬಿಟ್ಟುಬಿಡತಕ್ಕದ್ದು:

ಪರಂತು, ಕರ್ನಾಟಕ ಲೋಕಸೇವಾ ಆಯೋಗದ ಅಧಿಸೂಚನೆ ಸಂಖ್ಯೆ ಇ (1) 1465, ದಿನಾಂಕ 28ನೇ ನವೆಂಬರ್ 1974ಕ್ಕೆ ಮತ್ತು ಸಂಖ್ಯೆ ಇ (1) 437/ 75/ 75–76 ಪಿಎಸ್‌ಸಿ, ದಿನಾಂಕ 5ನೇ ಜುಲೈ, 1975ಕ್ಕೆ ಅನುಸಾರವಾಗಿ ಮೂಲ ನಿಯಮಗಳ ಅಡಿಯಲ್ಲಿ ಮಾಡಿಕೊಳ್ಳುವ ನೇಮಕಾತಿಯನ್ನು ಮೂಲ ನಿಯಮಗಳನ್ನು ಮತ್ತು ಸದರಿ ನಿಯಮಗಳನ್ನು ಈ ನಿಯಮಗಳ ಮೂಲಕ ತಿದ್ದುಪಡಿ ಮಾಡಿರದಿದ್ದರೆ ಹೇಗೋ ಹಾಗೆ ಮಾಡತಕ್ಕದ್ದು.

**ಕರ್ನಾಟಕ ರಾಜ್ಯಪಾಲರು**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸೈಯದ್ ಕರೀಮುಲ್ಲಾ ಖಾದ್ರಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಾಮಾನ್ಯ ಆಡಳಿತ ಇಲಾಖೆ ಸೇವಾ ನಿಯಮಗಳು).

**ಸಾಮಾನ್ಯ ಆಡಳಿತ ಸಚಿವಾಲಯ**

ಅಧಿಸೂಚನೆ ಸಂಖ್ಯೆ ಜಿಎಡಿ 12 ಎಸ್ ಎಸ್ ಆರ್ 75

ಬೆಂಗಳೂರು, ದಿನಾಂಕ 27ನೇ ಜುಲೈ, 1975

**ಜಿ.ಎಸ್.ಆರ್. 152.–** ಭಾರತದ ಸಂವಿಧಾನದ 309ನೇ ಅನುಚ್ಛೇದದ ಪರಂತುಕದಿಂದ ಪ್ರದತ್ತವಾದ ಅಧಿಕಾರಗಳನ್ನು ಮತ್ತು ಈ ಸಂಬಂಧವಾಗಿ ರಾಜ್ಯಪಾಲರನ್ನು ಶಕ್ತಗೊಳಿಸುವ ಎಲ್ಲ ಇತರ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ರಾಜ್ಯಪಾಲರು ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು, 1957ನ್ನು ಮತ್ತಷ್ಟು ತಿದ್ದುಪಡಿ ಮಾಡಲು ಈ ಮುಂದಿನ ನಿಯಮಗಳನ್ನು ಈ ಮೂಲಕ ರಚಿಸುತ್ತಾರೆ, ಎಂದರೆ:–

**1. ಹೆಸರು ಮತ್ತು ಪ್ರಾರಂಭ.–** (1) ಈ ನಿಯಮಗಳನ್ನು ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) (ಮೂರನೇ ತಿದ್ದುಪಡಿ) ನಿಯಮಗಳು, 1975 ಎಂದು ಕರೆಯತಕ್ಕದ್ದು.

(2) ಅವು, ಸರ್ಕಾರಿ ರಾಜ್ಯಪತ್ರದಲ್ಲಿ ಅವುಗಳನ್ನು ಪ್ರಕಟಿಸಿದ ದಿನಾಂಕದಂದು ಜಾರಿಗೆ ಬರತಕ್ಕದ್ದು.

**2. 9ನೇ ನಿಯಮದ ತಿದ್ದುಪಡಿ.–** ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು, 1957ರ 9ನೇ ನಿಯಮದ (2)ನೇ ಉಪನಿಯಮದ (ಇ) ಖಂಡದ ನಂತರ, ಈ ಮುಂದಿನ ಖಂಡವನ್ನು ಸೇರಿಸತಕ್ಕದ್ದು, ಎಂದರೆ:–

"(ಎಫ್) ಸರ್ಕಾರದ ಕಾರ್ಯದರ್ಶಿಗಳು ತಮ್ಮ ಆಡಳಿತ ನಿಯಂತ್ರಣದಲ್ಲಿ ಕೆಲಸ ಮಾಡುತ್ತಿರುವ ಕರ್ನಾಟಕ ಸಚಿವಾಲಯ ಸೇವೆ ವರ್ಗ IIರ ಸದಸ್ಯರ ಮೇಲೆ 8ನೇ ನಿಯಮದ (ii), (iii) ಮತ್ತು (iiiಎ) ಖಂಡಗಳಲ್ಲಿ ನಿರ್ದಿಷ್ಟಪಡಿಸಿದ ದಂಡನೆಗಳನ್ನು ವಿಧಿಸಬಹುದು".

**ಕರ್ನಾಟಕ ರಾಜ್ಯಪಾಲರು**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸೈಯದ್ ಕರೀಮುಲ್ಲಾ ಖಾದ್ರಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಾಮಾನ್ಯ ಆಡಳಿತ ಇಲಾಖೆ (ಸೇವಾ ನಿಯಮಗಳು).

**ಕೇಂದ್ರ ಅಧಿನಿಯಮಗಳ ಮತ್ತು ರಾಜ್ಯ ಅಧಿನಿಯಮಗಳ ಮೇರೆಗೆ ರಾಜ್ಯ ಸರ್ಕಾರವು ಹೊರಡಿಸಿದ ಸಾಮಾನ್ಯ ಶಾಸನ ಬದ್ಧ ನಿಯಮಗಳು ಮತ್ತು ಸಂವಿಧಾನದ ಮೇರೆಗೆ ರಾಜ್ಯಪಾಲರು ರಚಿಸಿದ ನಿಯಮಗಳು**

**ಮುಖ್ಯ ಸಚಿವಾಲಯ**

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

(ಸೇವಾ ನಿಯಮಗಳು)

ಅಧಿಸೂಚನೆ ಸಂಖ್ಯೆ ಡಿಪಿಎಆರ್ 34 ಎಸ್‌ಎಸ್‌ಆರ್ 76, ಬೆಂಗಳೂರು, ದಿನಾಂಕ 7ನೇ ಜುಲೈ 1976

**ಜಿ.ಎಸ್.ಆರ್. 198.–** ಭಾರತದ ಸಂವಿಧಾನದ 309ನೇ ಅನುಚ್ಛೇದದ ಪರಂತುಕದಿಂದ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ರಾಜ್ಯಪಾಲರು ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು, 1957ನ್ನು ಮತ್ತಷ್ಟು ತಿದ್ದುಪಡಿ ಮಾಡಲು ಈ ಮುಂದಿನ ನಿಯಮಗಳನ್ನು ಈ ಮೂಲಕ ರಚಿಸುತ್ತಾರೆ, ಎಂದರೆ:–

**1. ಹೆಸರು ಮತ್ತು ಪ್ರಾರಂಭ.–** (1) ಈ ನಿಯಮಗಳನ್ನು ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) (ಮೂರನೇ ತಿದ್ದುಪಡಿ) ನಿಯಮಗಳು, 1976 ಎಂದು ಕರೆಯತಕ್ಕದ್ದು.

(2) ಅವು ಸರ್ಕಾರಿ ರಾಜ್ಯಪತ್ರದಲ್ಲಿ ಅವುಗಳನ್ನು ಪ್ರಕಟಿಸಿದ ದಿನಾಂಕದಂದು ಜಾರಿಗೆ ಬರತಕ್ಕದ್ದು.

**2. 12ಎ ನಿಯಮದ ತಿದ್ದುಪಡಿ.–** ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು, 1957 (ಇಲ್ಲಿ ಇನ್ನು ಮುಂದೆ ಸದರಿ ನಿಯಮಗಳೆಂದು ಉಲ್ಲೇಖಿಸಲಾಗಿದೆ)ರ 12ಎ ನಿಯಮಕ್ಕೆ ಈ ಮುಂದಿನ ಪರಂತುಕವನ್ನು ಸೇರಿಸತಕ್ಕದ್ದು, ಎಂದರೆ:–

"ಪರಂತು, ಶಿಸ್ತು ಪ್ರಾಧಿಕಾರಿಯು ಸರ್ಕಾರಿ ನೌಕರನನ್ನು ದೋಷಮುಕ್ತನನ್ನಾಗಿ ಮಾಡಿದ್ದರೆ ಅಥವಾ ಅಂಥ ದಸ್ತಾವೇಜುಗಳನ್ನು ಸರ್ಕಾರಿ ನೌಕರನಿಗೆ ಈಗಾಗಲೇ ಒದಗಿಸಿದ್ದರೆ, ಸದರಿ ದಸ್ತಾವೇಜುಗಳ ಪ್ರತಿಗಳನ್ನು ಒದಗಿಸುವುದು ಅವಶ್ಯಕವಾಗಿರತಕ್ಕದ್ದಲ್ಲ".

**3. 28ಸಿ ನಿಯಮದ ತಿದ್ದುಪಡಿ.–** ಸದರಿ ನಿಯಮಗಳ 28–ಸಿ ನಿಯಮಕ್ಕೆ ಈ ಮುಂದಿನ ಪರಂತುಕವನ್ನು ಸೇರಿಸತಕ್ಕದ್ದು, ಎಂದರೆ:–

"ಪರಂತು, ಶಿಸ್ತು ಪ್ರಾಧಿಕಾರಿಯು ಸರ್ಕಾರಿ ನೌಕರನನ್ನು ದೋಷಮುಕ್ತನನ್ನಾಗಿ ಮಾಡಿದ್ದರೆ ಅಥವಾ ಅಂಥ ದಸ್ತಾವೇಜುಗಳನ್ನು ಸರ್ಕಾರಿ ನೌಕರನಿಗೆ ಈಗಾಗಲೇ ಒದಗಿಸಿದ್ದರೆ, ಸದರಿ ದಸ್ತಾವೇಜುಗಳ ಪ್ರತಿಗಳನ್ನು ಒದಗಿಸುವುದು ಅವಶ್ಯಕವಾಗಿರತಕ್ಕದ್ದಲ್ಲ".

**ಕರ್ನಾಟಕ ರಾಜ್ಯಪಾಲರು**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸೈಯದ್ ಕರೀಮುಲ್ಲಾ ಖಾದ್ರಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಾಮಾನ್ಯ ಆಡಳಿತ ಇಲಾಖೆ

(ಸೇವಾ ನಿಯಮಗಳು).

**ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ**

ಅಧಿಸೂಚನೆ ಸಂಖ್ಯೆ ಡಿಪಿಎಆರ್ 70 ಎಸ್‌ಎಸ್‌ಆರ್ 76, ಬೆಂಗಳೂರು, ದಿನಾಂಕ 15ನೇ ಜನವರಿ 1977

**ಜಿ.ಎಸ್.ಆರ್. 29.–** ಭಾರತದ ಸಂವಿಧಾನದ 309ನೇ ಅನುಚ್ಛೇದದ ಪರಂತುಕದಿಂದ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ರಾಜ್ಯಪಾಲರು ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು, 1957ನ್ನು ಮತ್ತಷ್ಟು ತಿದ್ದುಪಡಿ ಮಾಡಲು ಈ ಮುಂದಿನ ನಿಯಮಗಳನ್ನು ಈ ಮೂಲಕ ರಚಿಸುತ್ತಾರೆ, ಎಂದರೆ:–

**1. ಹೆಸರು ಮತ್ತು ಪ್ರಾರಂಭ.–** (1) ಈ ನಿಯಮಗಳನ್ನು ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) (ತಿದ್ದುಪಡಿ) ನಿಯಮಗಳು, 1977 ಎಂದು ಕರೆಯತಕ್ಕದ್ದು.

(2) ಅವು ಸರ್ಕಾರಿ ರಾಜ್ಯಪತ್ರದಲ್ಲಿ ಅವುಗಳನ್ನು ಪ್ರಕಟಿಸಿದ ದಿನಾಂಕದಂದು ಜಾರಿಗೆ ಬರತಕ್ಕದ್ದು.

**2. 11ಎ ನಿಯಮದ ತಿದ್ದುಪಡಿ.–** ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು, 1957ರ (ಇಲ್ಲಿ ಇನ್ನು ಮುಂದೆ ಸದರಿ ನಿಯಮಗಳೆಂದು ಉಲ್ಲೇಖಿಸಲಾಗಿದೆ) 11ಎ ನಿಯಮದಲ್ಲಿ,–

(i) (3)ನೇ ಉಪ–ನಿಯಮದಲ್ಲಿ,–

(i) 8ನೇ ನಿಯಮದ "(i) ರಿಂದ (ivಎ) ವರೆಗಿನ ಖಂಡಗಳಲ್ಲಿ ನಿರ್ದಿಷ್ಟಪಡಿಸಿದ ಯಾವುವೇ ದಂಡನೆಗಳನ್ನು" ಎಂಬ ಪದಗಳ ಬದಲಾಗಿ "8ನೇ ನಿಯಮದಲ್ಲಿ ನಿರ್ದಿಷ್ಟಪಡಿಸಿದ ಒಂದು ಅಥವಾ ಹೆಚ್ಚು ದಂಡನೆಗಳನ್ನು" ಎಂಬ ಪದಗಳನ್ನು ಸೇರಿಸತಕ್ಕದ್ದು.

(ii) (4)ನೇ ಉಪನಿಯಮವವನ್ನು ಬಿಟ್ಟುಬಿಡತಕ್ಕದ್ದು.

**3. 25ನೇ ನಿಯಮದ ತಿದ್ದುಪಡಿ.–** ಸದರಿ ನಿಯಮಗಳ 25ನೇ ನಿಯಮದಲ್ಲಿ, (2)ನೇ ಉಪ ನಿಯಮದ ಪರಂತುಕದ (ii)ನೇ ಖಾಬಿನಲ್ಲಿ, "ಮತ್ತು ಅಂಥ ದಂಡನೆಯ ವಿರುದ್ಧ ಅವನು ಸಲ್ಲಿಸಲು ಇಚ್ಛಿಸಬಹುದಾದಂಥ ಯಾವುದೇ ಮನವಿಯನ್ನು ಸಲ್ಲಿಸಲು ಸಂಬಂಧಪಟ್ಟ ವ್ಯಕ್ತಿಗೆ ಅವಕಾಶವನ್ನು ಕೊಟ್ಟ ನಂತರ" ಎಂಬ ಪದಗಳನ್ನು ಬಿಟ್ಟುಬಿಡತಕ್ಕದ್ದು.

**4. 26ನೇ ನಿಯಮದ ತಿದ್ದುಪಡಿ.–** ಸದರಿ ನಿಯಮಗಳ 26ನೇ ನಿಯಮದ ಪರಂತುಕದ (ii)ನೇ ಖಾಬಿನಲ್ಲಿ, "ಮತ್ತು ಅಂಥ ದಂಡನೆಯ ವಿರುದ್ಧ ಅವನು ಸಲ್ಲಿಸಲು ಇಚ್ಛಿಸಬಹುದಾದಂಥ ಯಾವುದೇ ಮನವಿಯನ್ನು ಸಲ್ಲಿಸಲು ಸಂಬಂಧಪಟ್ಟ ವ್ಯಕ್ತಿಗೆ ಅವಕಾಶವನ್ನು ಕೊಟ್ಟ ನಂತರ" ಎಂಬ ಪದಗಳನ್ನು ಬಿಟ್ಟುಬಿಡತಕ್ಕದ್ದು.

**ಕರ್ನಾಟಕ ರಾಜ್ಯಪಾಲರು**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸೈಯದ್ ಕರೀಮುಲ್ಲಾ ಖಾದ್ರಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಾಮಾನ್ಯ ಆಡಳಿತ ಇಲಾಖೆ

(ಸೇವಾ ನಿಯಮಗಳು).

**ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ**

ಅಧಿಸೂಚನೆ ಸಂಖ್ಯೆ ಡಿಪಿಎಆರ್ 70 ಎಸ್‌ಎಸ್‌ಆರ್ 79, ಬೆಂಗಳೂರು, ದಿನಾಂಕ 15ನೇ ಜೂನ್, 1981

ಭಾರತ ಸಂವಿಧಾನದ 309ನೇ ಅನುಚ್ಛೇದದ ಪರಂತುಕದಿಂದ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ರಾಜ್ಯಪಾಲರು ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು, 1957ನ್ನು ಮತ್ತಷ್ಟು ತಿದ್ದುಪಡಿ ಮಾಡಲು ಈ ಮುಂದಿನ ನಿಯಮಗಳನ್ನು ಈ ಮೂಲಕ ರಚಿಸುತ್ತಾರೆ, ಎಂದರೆ:–

**1. ಹೆಸರು ಮತ್ತು ಪ್ರಾರಂಭ.–** (1) ಈ ನಿಯಮಗಳನ್ನು ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) (ಇಪ್ಪತ್ತೊಂದನೇ ತಿದ್ದುಪಡಿ) ನಿಯಮಗಳು, 1981 ಎಂದು ಕರೆಯತಕ್ಕದ್ದು.

(2) ಅವು, ಸರ್ಕಾರಿ ರಾಜ್ಯಪತ್ರದಲ್ಲಿ ಅವುಗಳನ್ನು ಪ್ರಕಟಿಸಿದ ದಿನಾಂಕದಂದು ಜಾರಿಗೆ ಬರತಕ್ಕದ್ದು.

**2. 5, 6, ಮತ್ತು 7ನೇ ನಿಯಮಗಳ ಬದಲಾಗಿ ಹೊಸ ನಿಯಮಗಳ ಸೇರ್ಪಡೆ.–** ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು, 1957ರ 5, 6, ಮತ್ತು 7ನೇ ನಿಯಮಗಳ ಬದಲಾಗಿ ಈ ಮುಂದಿನ ನಿಯಮಗಳನ್ನು ಸೇರಿಸತಕ್ಕದ್ದು, ಎಂದರೆ:–

"**5. ಸೇವೆಗಳ ವರ್ಗೀಕರಣ.–** (1) ಕರ್ನಾಟಕ ರಾಜ್ಯದ ಸಿವಿಲ್ ಸೇವೆಗಳನ್ನು ಈ ಮುಂದಿನಂತೆ ವರ್ಗೀಕರಿಸತಕ್ಕದ್ದು:–

(i) ರಾಜ್ಯ ಸಿವಿಲ್ ಸೇವೆಗಳು, ಸಮೂಹ –ಎ

(ii) ರಾಜ್ಯ ಸಿವಿಲ್ ಸೇವೆಗಳು, ಸಮೂಹ –ಬಿ

(iii) ರಾಜ್ಯ ಸಿವಿಲ್ ಸೇವೆಗಳು, ಸಮೂಹ –ಸಿ ಮತ್ತು

(iv) ರಾಜ್ಯ ಸಿವಿಲ್ ಸೇವೆಗಳು, ಸಮೂಹ –ಡಿ

(2) ಒಂದು ಸೇವೆಯು ಒಂದಕ್ಕಿಂತ ಹೆಚ್ಚು ಹುದ್ದೆಯ ಶ್ರೇಣಿಗಳನ್ನು ಒಳಗೊಂಡಿದ್ದರೆ, ಬೇರೆ ಬೇರೆ ಹುದ್ದೆಯ ಶ್ರೇಣಿಗಳನ್ನು ಬೇರೆ ಬೇರೆ ಸಮೂಹಗಳಲ್ಲಿ ಸೇರಿಸಬಹುದು.

(3) (ಎ) ರಾಜ್ಯ ಸಿವಿಲ್ ಸೇವೆಗಳ ಸಮೂಹ 'ಎ'ಯು – ರೂ. 900–1750ರ ಮತ್ತು ಅದಕ್ಕೂ ಮೇಲ್ಪಟ್ಟ ವೇತನ ಶ್ರೇಣಿಗಳನ್ನು ಹೊಂದಿರುವ ಹುದ್ದೆಗಳನ್ನು ಒಳಗೊಂಡಿರತಕ್ಕದ್ದು;

(ಬಿ) ರಾಜ್ಯ ಸಿವಿಲ್ ಸೇವೆಗಳ ಸಮೂಹ 'ಬಿ'ಯು ರೂ. 660–1300ರ ಮತ್ತು ಅದಕ್ಕೂ ಮೇಲ್ಪಟ್ಟ ವೇತನ ಶ್ರೇಣಿಗಳನ್ನು, ಆದರೆ ರೂ. 900–1750ಕ್ಕಿಂತ ಕೆಳಗಿನ ವೇತನ ಶ್ರೇಣಿಗಳನ್ನು ಹೊಂದಿರುವ ಹುದ್ದೆಗಳನ್ನು ಒಳಗೊಂಡಿರತಕ್ಕದ್ದು.

(ಸಿ) ಯಾವ ರಾಜ್ಯ ಸಿವಿಲ್ ಸೇವೆಗಳ ಸಮೂಹ 'ಸಿ' ಯು ರೂ. 250–400ರ ವೇತನ ಶ್ರೇಣಿಯನ್ನು ಹೊಂದಿರುವವೋ ಮತ್ತು ಅವುಗಳ ನೇಮಕಕ್ಕಾಗಿ ಯಾವುದೇ ಅಕಾಡಮಿಕ್, ತಾಂತ್ರಿಕ ಅಥವಾ ವೃತ್ತೀಯ ಅರ್ಹತೆಗಳನ್ನು ಗೊತ್ತುಪಡಿಸಲಾಗಿದೆಯೋ ಆ ಹುದ್ದೆಗಳನ್ನು, ಆದರೆ ಅನುಸೂಚಿ –IV ರಲ್ಲಿ ನಿರ್ದಿಷ್ಟಪಡಿಸಿರುವ ಹುದ್ದೆಗಳನ್ನು ಹೊರತುಪಡಿಸಿ ಇತರ ಹುದ್ದೆಗಳನ್ನು ಒಳಗೊಂಡಿರತಕ್ಕದ್ದು.

(ಡಿ) ರಾಜ್ಯ ಸಿವಿಲ್ ಸೇವೆಗಳ ಸಮೂಹ 'ಡಿ' ಯು ಅನುಸೂಚಿ– IVರಲ್ಲಿ ನಿರ್ದಿಷ್ಟಪಡಿಸಿರುವ ಹುದ್ದೆಗಳನ್ನು ಮತ್ತು ರೂ. 250–400ರ ವೇತನ ಶ್ರೇಣಿಯನ್ನು ಹೊಂದಿರುವ ಹುದ್ದೆಗಳನ್ನು ಒಳಗೊಂಡಿರತಕ್ಕದ್ದು.

**ವಿವರಣೆ.–** ಈ ಉಪನಿಯಮದ ಉದ್ದೇಶಗಳಿಗಾಗಿ "ವೇತನ ಶ್ರೇಣಿ" ಎಂದರೆ ಕರ್ನಾಟಕ ಸಿವಿಲ್ ಸೇವಾ (ಪರಿಷ್ಕೃತ ವೇತನ) ನಿಯಮಗಳು, 1976ರಲ್ಲಿ ವಿವಿಧ ಹುದ್ದೆಗಳಿಗೆ ಸಂಬಂಧಿಸಿದಂತೆ ನಿಗದಿಪಡಿಸಿದ ವೇತನ ಶ್ರೇಣಿ.

**ಸೂಚನೆ:–** ಈ ನಿಯಮಗಳಲ್ಲಿ ಮತ್ತು ಈ ನಿಯಮಗಳು ಪ್ರಾರಂಭವಾಗುವುದಕ್ಕೆ ನಿಕಟ ಪೂರ್ವದಲ್ಲಿ ಜಾರಿಯಲ್ಲಿದ್ದ ಎಲ್ಲ ಇತರ ನಿಯಮಗಳಲ್ಲಿ, ಆದೇಶಗಳಲ್ಲಿ, ಅನುಸೂಚಿಗಳಲ್ಲಿ, ಅಧಿಸೂಚನೆಗಳಲ್ಲಿ, ವಿನಿಯಮಗಳಲ್ಲಿ ಅಥವಾ ಸೂಚನೆಗಳಲ್ಲಿ ರಾಜ್ಯ ಸಿವಿಲ್ ಸೇವೆಗಳ ವರ್ಗ–Iಕ್ಕೆ,

ವರ್ಗ–IIಕ್ಕೆ, ವರ್ಗ–IIIಕ್ಕೆ ಮತ್ತು ವರ್ಗ–IV ಕ್ಕೆ ಮಾಡಿದ ಎಲ್ಲ ಉಲ್ಲೇಖಗಳನ್ನು ಅನುಕ್ರಮವಾಗಿ ರಾಜ್ಯ ಸಿವಿಲ್ ಸೇವೆಗಳ ಸಮೂಹ–ಎಗೆ, ಸಮೂಹ–ಬಿಗೆ, ಸಮೂಹ–ಸಿಗೆ ಮತ್ತು ಸಮೂಹ–ಡಿಗೆ ಮಾಡಿರುವ ಉಲ್ಲೇಖಗಳೆಂದು ಅರ್ಥೈಸತಕ್ಕದ್ದು ಮತ್ತು ಈ ಸಂದರ್ಭದಲ್ಲಿ ಅದರಲ್ಲಿನ "ವರ್ಗಕ್ಕೆ ಅಥವಾ ವರ್ಗಗಳಿಗೆ" ಮಾಡಿದ ಯಾವುದೇ ಉಲ್ಲೇಖವನ್ನು, ಸಂದರ್ಭಾನುಸಾರ, "ಸಮೂಹಕ್ಕೆ ಅಥವಾ ಸಮೂಹಗಳಿಗೆ ಮಾಡಿದ ಉಲ್ಲೇಖವೆಂದು ಅರ್ಥೈಸತಕ್ಕದ್ದು".

**6. ರಾಜ್ಯ ಸಿವಿಲ್ ಸೇವೆಗಳ ರಚನೆ.–** ರಾಜ್ಯ ಸಿವಿಲ್ ಸೇವೆಗಳ ಸಮೂಹಗಳು ಎ, ಬಿ, ಸಿ ಮತ್ತು ಡಿ– ಗಳು ಅನುಸೂಚಿ I, II ಮತ್ತು III ರಲ್ಲಿ ನಿರ್ದಿಷ್ಟಪಡಿಸಿದ ಸೇವೆಗಳನ್ನು ಮತ್ತು ಹುದ್ದೆಗಳನ್ನು ಒಳಗೊಳ್ಳತಕ್ಕದ್ದು.

**7. ರಾಜ್ಯ ಸಿವಿಲ್ ಸೇವೆಗಳಿಗೆ ನೇಮಕಗಳು.–** (1) ಅನ್ಯಥಾ ತಿದ್ದುಪಡಿ ಮಾಡಿದ್ದ ಹೊರತು, ರಾಜ್ಯ ಸಿವಿಲ್ ಸೇವೆಗಳ ಸಮೂಹ 'ಎ', ಸಮೂಹ 'ಬಿ' ಯ ಎಲ್ಲ ಮೊದಲ ನೇಮಕಗಳನ್ನು ಸರ್ಕಾರವು ಮಾಡತಕ್ಕದ್ದು:

ಪರಂತು, ರಾಜ್ಯ ಸಿವಿಲ್ ಸೇವೆಗಳ ಸಮೂಹ 'ಬಿ' ಅಡಿಯಲ್ಲಿನ ಯಾವುದೇ ಹುದ್ದೆಗಳ ಸಂಬಂಧದಲ್ಲಿ, ಇತರ ಯಾವುದೇ ನೇಮಕ ಪ್ರಾಧಿಕಾರಿಯನ್ನು ನಿರ್ದಿಷ್ಟಪಡಿಸಿದ್ದರೆ, ಅಂಥ ಹುದ್ದೆಗಳಿಗೆ ಮೊದಲ ನೇಮಕಗಳನ್ನು ಹಾಗೆ ನಿರ್ದಿಷ್ಟಪಡಿಸಿದ ಪ್ರಾಧಿಕಾರಿಯು ಮಾಡತಕ್ಕದ್ದು.

(2) ರಾಜ್ಯ ಸಿವಿಲ್ ಸೇವೆಗಳ 'ಸಿ' ಮತ್ತು 'ಡಿ' ಸಮೂಹಗಳಿಗೆ ಮಾಡುವ ಮೊದಲ ಎಲ್ಲ ನೇಮಕಗಳನ್ನು II ಮತ್ತು IIIನೇ ಅನುಸೂಚಿಗಳ 2ನೇ ಅಂಕಣದಲ್ಲಿ ನಮೂದಿಸಿದ ಪ್ರಾಧಿಕಾರಿಗಳು ಮಾಡತಕ್ಕದ್ದು.

ಕರ್ನಾಟಕ ರಾಜ್ಯಪಾಲರು
ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ವಿ.ಎಸ್. ನಾಯಕ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ,
(ಸೇವಾ ನಿಯಮಗಳು).

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆಗಳ ಸಚಿವಾಲಯ

ಅಧಿಸೂಚನೆ ಸಂಖ್ಯೆ ಡಿಪಿಎಆರ್ 25 ಎಸ್‌ಡಿಇ 82, ಬೆಂಗಳೂರು, ದಿನಾಂಕ 23ನೇ ಆಗಸ್ಟ್, 1983

ಭಾರತ ಸಂವಿಧಾನದ 309ನೇ ಅನುಚ್ಛೇದದ ಪರಂತುಕದಿಂದ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ರಾಜ್ಯಪಾಲರು ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು, 1957ನ್ನು ಮತ್ತಷ್ಟು ತಿದ್ದುಪಡಿ ಮಾಡಲು ಈ ಮುಂದಿನ ನಿಯಮಗಳನ್ನು ಈ ಮೂಲಕ ರಚಿಸುತ್ತಾರೆ, ಎಂದರೆ:–

**1. ಹೆಸರು ಮತ್ತು ಪ್ರಾರಂಭ.–** (1) ಈ ನಿಯಮಗಳನ್ನು ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) (ನಾಲ್ಕನೇ ತಿದ್ದುಪಡಿ) ನಿಯಮಗಳು, 1983 ಎಂದು ಕರೆಯತಕ್ಕದ್ದು.

(2) ಅವು, ಸರ್ಕಾರಿ ರಾಜ್ಯಪತ್ರದಲ್ಲಿ ಅವುಗಳನ್ನು ಪ್ರಕಟಿಸಿದ ದಿನಾಂಕದಂದು ಜಾರಿಗೆ ಬರತಕ್ಕದ್ದು.

**2. 11ನೇ ನಿಯಮದ ತಿದ್ದುಪಡಿ.–** ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು, 1957ರ 11ನೇ ನಿಯಮದಲ್ಲಿ, (6)ನೇ ಉಪನಿಯಮದ ನಂತರ ಈ ಮುಂದಿನ ಪರಂತುಕವನ್ನು ಸೇರಿಸತಕ್ಕದ್ದು, ಎಂದರೆ:–

"ಪರಂತು, ಶಿಸ್ತು ಪ್ರಾಧಿಕಾರಿಯು (2)ನೇ ಉಪನಿಯಮದ ಮೇರೆಗೆ ಕರ್ನಾಟಕ ರಾಜ್ಯ ಜಾಗೃತ ಆಯೋಗದ ಒಬ್ಬ ಅಧಿಕಾರಿಯನ್ನು ವಿಚಾರಣಾ ಪ್ರಾಧಿಕಾರಿಯನ್ನಾಗಿ ನೇಮಕ ಮಾಡಿದರೆ, ಅಂಥ ಅಧಿಕಾರಿಯು, ಆರೋಪ ವಿಷಯಗಳನ್ನು, ದುರ್ನಡತೆಯ ಅಥವಾ ದುರ್ವರ್ತನೆಯ ಆರೋಪಣೆಗಳ ವಿವರಣೆಯನ್ನು, ದಸ್ತಾವೇಜುಗಳ ಪಟ್ಟಿಯನ್ನು ಮತ್ತು ಸಾಕ್ಷಿದಾರರ ಪಟ್ಟಿಯನ್ನು ಬದಲಾಯಿಸುವುದು ಅಥವಾ ಮಾರ್ಪಾಟು ಮಾಡುವುದು ಅವರ ಅಭಿಪ್ರಾಯದಲ್ಲಿ ಅವಶ್ಯವೆಂದು ಪರಿಗಣಿಸಿದರೆ, ಅವರು ಹಾಗೆ ಮಾಡಬಹುದು ಮತ್ತು ಶಿಸ್ತು ಪ್ರಾಧಿಕಾರಿಗೆ ತಿಳಿಸುವುದರ ಮೂಲಕ ಇವುಗಳ ಒಂದು ಪ್ರತಿಯನ್ನು ಸರ್ಕಾರಿ ನೌಕರನಿಗೆ ಕೊಡಬಹುದು ಅಥವಾ ಕೊಡಿಸಬಹುದು ಮತ್ತು ನಿರ್ದಿಷ್ಟಪಡಿಸಬಹುದಾದಂಥ ಕಾಲದೊಳಗೆ, ಸರ್ಕಾರಿ ನೌಕರನು, ತನ್ನ ಪ್ರತಿವಾದದ ಲಿಖಿತ ಹೇಳಿಕೆಯನ್ನು ಸಲ್ಲಿಸುವಂತೆ ಮತ್ತು ಖುದ್ದಾಗಿ ತನ್ನ ಅಹವಾಲನ್ನು ಹೇಳಿಕೊಳ್ಳಲು ಅವನು ಇಚ್ಛಿಸುವನೇ ಹೇಗೆ ಎಂಬುದನ್ನು ತಿಳಿಸುವಂತೆ ಅವನನ್ನು ಅಗತ್ಯಪಡಿಸತಕ್ಕದ್ದು".

**ಕರ್ನಾಟಕ ರಾಜ್ಯಪಾಲರು**
ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಜಿ.ಕೆ. ಸಂಗೋರಾಂ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ,
(ಸೇವಾ ನಿಯಮಗಳು).

**ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ**

ಅಧಿಸೂಚನೆ ಸಂಖ್ಯೆ ಡಿಪಿಎಆರ್ 11 ಎಸ್‌ಡಿಇ 83, ಬೆಂಗಳೂರು, ದಿನಾಂಕ 23ನೇ ಫೆಬ್ರವರಿ, 1984

ಭಾರತ ಸಂವಿಧಾನದ 309ನೇ ಅನುಚ್ಛೇದದ ಪರಂತುಕದಿಂದ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ರಾಜ್ಯಪಾಲ, ಎ.ಎನ್. ಬ್ಯಾನರ್ಜಿ ಆದ ನಾನು, ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು, 1957ನ್ನು ಮತ್ತಷ್ಟು ತಿದ್ದುಪಡಿ ಮಾಡಲು ಈ ಮುಂದಿನ ನಿಯಮಗಳನ್ನು ಈ ಮೂಲಕ ರಚಿಸುತ್ತೇನೆ, ಎಂದರೆ:–

**1. ಹೆಸರು ಮತ್ತು ಪ್ರಾರಂಭ.–** (1) ಈ ನಿಯಮಗಳನ್ನು ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) (ತಿದ್ದುಪಡಿ) ನಿಯಮಗಳು, 1984 ಎಂದು ಕರೆಯತಕ್ಕದ್ದು.

(2) ಅವು, ಸರ್ಕಾರಿ ರಾಜ್ಯಪತ್ರದಲ್ಲಿ ಅವುಗಳನ್ನು ಪ್ರಕಟಿಸಿದ ದಿನಾಂಕದಂದು ಜಾರಿಗೆ ಬರತಕ್ಕದ್ದು.

**2. 18ನೇ ನಿಯಮದ ತಿದ್ದುಪಡಿ.–** ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು, 1957ರ 18ನೇ ನಿಯಮದ (3)ನೇ ಉಪ ನಿಯಮದ ಕೊನೆಯಲ್ಲಿ ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

"ಮತ್ತು ಅಪೀಲು ಪ್ರಾಧಿಕಾರಿಯು ಮಾಡಿದ ಆದೇಶಗಳ ವಿರುದ್ಧ ಅಪೀಲು ಪ್ರಾಧಿಕಾರಿಯು ಯಾರಿಗೆ ನಿಕಟ ಅಧೀನ ಅಧಿಕಾರಿಯಾಗಿರುವನೋ ಆ ಪ್ರಾಧಿಕಾರಿಗೆ ಅಪೀಲು ಸಲ್ಲಿಸಬಹುದು".

**ಕರ್ನಾಟಕ ರಾಜ್ಯಪಾಲರು**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜಿ.ಕೆ. ಸಂಗೋರಾಂ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ,

(ಸೇವಾ ನಿಯಮಗಳು).

**ಕರ್ನಾಟಕ ಸರ್ಕಾರ**

ಸಂಖ್ಯೆ: ಡಿಪಿಎಆರ್ 39 ಎಸ್‌ಡಿಇ 81

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಧಾನ ಸೌಧ,
ಬೆಂಗಳೂರು, ದಿನಾಂಕ 27ನೇ ಜೂನ್ 1984.

**ಅಧಿಸೂಚನೆ**

ಭಾರತ ಸಂವಿಧಾನದ 309ನೇ ಅನುಚ್ಛೇದದ ಪರಂತುಕದಿಂದ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ರಾಜ್ಯಪಾಲ, ಎ.ಎನ್. ಬ್ಯಾನರ್ಜಿ ಆದ ನಾನು, ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು, 1957ನ್ನು ಮತ್ತಷ್ಟು ತಿದ್ದುಪಡಿ ಮಾಡಲು ಈ ಮುಂದಿನ ನಿಯಮಗಳನ್ನು ಈ ಮೂಲಕ ರಚಿಸುತ್ತೇನೆ, ಎಂದರೆ:–

**1. ಹೆಸರು ಮತ್ತು ಪ್ರಾರಂಭ.–** (1) ಈ ನಿಯಮಗಳನ್ನು ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) (ಎರಡನೇ ತಿದ್ದುಪಡಿ) ನಿಯಮಗಳು, 1984 ಎಂದು ಕರೆಯತಕ್ಕದ್ದು.

(2) ಅವು, ಸರ್ಕಾರಿ ರಾಜ್ಯಪತ್ರದಲ್ಲಿ ಅವುಗಳನ್ನು ಪ್ರಕಟಿಸಿದ ದಿನಾಂಕದಂದು ಜಾರಿಗೆ ಬರತಕ್ಕದ್ದು.

**2. 8ನೇ ನಿಯಮದ ತಿದ್ದುಪಡಿ.–** ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು, 1957ರ 8ನೇ ನಿಯಮದ (ivಎ) ಖಂಡದ ಬದಲಾಗಿ ಈ ಮುಂದಿನ ಖಂಡವನ್ನು ಸೇರಿಸತಕ್ಕದ್ದು, ಎಂದರೆ:–

"(ivಎ) ಒಂದು ಅವಧಿಗೆ ಕಾಲಿಕ ವೇತನ ಶ್ರೇಣಿಯಲ್ಲಿ ಕೆಳಗಿನ ಹಂತಕ್ಕೆ ಇಳಿಸುವುದು, ಅಂಥ ಅವಧಿಯಲ್ಲಿ ಇಳಿಸಿದ ವೇತನಕ್ಕೆ ಸಂಬಂಧಿಸಿದಂತೆ ಸರ್ಕಾರಿ ನೌಕರನು ವೇತನ ಬಡ್ತಿಗಳನ್ನು ಗಳಿಸುವನೇ, ಇಲ್ಲವೇ ಅಥವಾ ಆ ವೇತನವು ಸ್ಥಿರವಾಗಿ ಉಳಿಯುವುದೇ ಎಂಬ ಬಗ್ಗೆ ನಿರ್ದಿಷ್ಟ ನಿರ್ದೇಶನದೊಂದಿಗೆ ಮತ್ತು ಅಂಥ ದಂಡನೆಯ ಅವಧಿಯು ಸಮಾಪ್ತವಾದ ಮೇಲೆ ಆ ಇಳಿಕೆಯು ಅವನ ವೇತನದ ಮುಂದಿನ ವೇತನ ಬಡ್ತಿಗಳನ್ನು ಮುಂದಕ್ಕೆ ಹಾಕುವ ಪರಿಣಾಮ ಹೊಂದಿರುವುದೇ ಅಥವಾ ಇಲ್ಲವೇ ಎಂಬ ಬಗ್ಗೆ ಹೆಚ್ಚಿನ ನಿರ್ದೇಶನದ ಸಹಿತ ಕೆಳಗಿನ ಹಂತಕ್ಕೆ ಇಳಿಸುವುದು."

**ಕರ್ನಾಟಕ ರಾಜ್ಯಪಾಲರು**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜಿ.ಕೆ. ಸಂಗೋರಾಂ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ,

(ಸೇವಾ ನಿಯಮಗಳು).

**ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ**

ಅಧಿಸೂಚನೆ ಸಂಖ್ಯೆ ಡಿಪಿಎಆರ್ 41 ಎಸ್‌ಡಿಇ 84, ಬೆಂಗಳೂರು, ದಿನಾಂಕ 17ನೇ ಜೂನ್, 1985

ಭಾರತ ಸಂವಿಧಾನದ 309ನೇ ಅನುಚ್ಛೇದದ ಪರಂತುಕದಿಂದ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ರಾಜ್ಯಪಾಲ, ಎ.ಎನ್. ಬ್ಯಾನರ್ಜಿ ಆದ ನಾನು, ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು, 1957ನ್ನು ಮತ್ತಷ್ಟು ತಿದ್ದುಪಡಿ ಮಾಡಲು ಈ ಮುಂದಿನ ನಿಯಮಗಳನ್ನು ಈ ಮೂಲಕ ರಚಿಸುತ್ತೇನೆ, ಎಂದರೆ:–

**1. ಹೆಸರು ಮತ್ತು ಪ್ರಾರಂಭ.–** (1) ಈ ನಿಯಮಗಳನ್ನು ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) (ಎರಡನೇ ತಿದ್ದುಪಡಿ) ನಿಯಮಗಳು, 1985 ಎಂದು ಕರೆಯತಕ್ಕದ್ದು.

(2) ಅವು, ಸರ್ಕಾರಿ ರಾಜ್ಯಪತ್ರದಲ್ಲಿ ಅವುಗಳನ್ನು ಪ್ರಕಟಿಸಿದ ದಿನಾಂಕದಂದು ಜಾರಿಗೆ ಬರತಕ್ಕದ್ದು.

**2. 11ನೇ ನಿಯಮದ ತಿದ್ದುಪಡಿ.–** ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು, 1957ರ 11ನೇ ನಿಯಮದಲ್ಲಿ,–

(i) (8)ನೇ ಉಪನಿಯಮದಲ್ಲಿ, "ಯಾರೇ ಇತರ ಸರ್ಕಾರಿ ನೌಕರನ" ಎಂಬ ಪದಗಳ ನಂತರ, "ಅಥವಾ ನಿವೃತ್ತ ಸರ್ಕಾರಿ ನೌಕರನ" ಎಂಬ ಪದಗಳನ್ನು ಸೇರಿಸತಕ್ಕದ್ದು ;

(ii) (8)ನೇ ಉಪನಿಯಮದ ನಂತರ ಈ ಮುಂದಿನ ಪರಂತುಕವನ್ನು ಸೇರಿಸತಕ್ಕದ್ದು, ಎಂದರೆ:–

"ಪರಂತು, ನಿವೃತ್ತ ಸರ್ಕಾರಿ ನೌಕರನು ನ್ಯಾಯವಾದಿ ಸಹ ಆಗಿದ್ದಾಗ, ಸರ್ಕಾರಿ ನೌಕರನು, ಶಿಸ್ತು ಪ್ರಾಧಿಕಾರಿಯು ನೇಮಿಸಿದ ಮಂಡನಾಧಿಕಾರಿಯು ನ್ಯಾಯವಾದಿಯಾಗಿದ್ದರೆ ಅಥವಾ ಶಿಸ್ತು ಪ್ರಾಧಿಕಾರಿಯು ಪ್ರಕರಣದ ಸಂದರ್ಭಗಳನ್ನು ಗಮನಿಸಿ, ನ್ಯಾಯವಾದಿಯಾಗಿರುವ ನಿವೃತ್ತ ಸರ್ಕಾರಿ ನೌಕರನನ್ನು ನೇಮಿಸಿಕೊಳ್ಳಲು ಅನುಮತಿಸಿದ ಹೊರತು ನೇಮಿಸಿಕೊಳ್ಳತಕ್ಕದ್ದಲ್ಲ."

**ಕರ್ನಾಟಕ ರಾಜ್ಯಪಾಲರು**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜಿ.ಕೆ. ಸಂಗೋರಾಂ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ, (ಸೇವಾ ನಿಯಮಗಳು).

**ಕರ್ನಾಟಕ ಸರ್ಕಾರ**

ಸಂಖ್ಯೆ: ಡಿಪಿಎಆರ್ 2 ಎಸ್‌ಡಿಇ 85

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಧಾನ ಸೌಧ,
ಬೆಂಗಳೂರು, ದಿನಾಂಕ 30ನೇ ಜುಲೈ 1985.

**ಅಧಿಸೂಚನೆ**

ಭಾರತ ಸಂವಿಧಾನದ 309ನೇ ಅನುಚ್ಛೇದದ ಪರಂತುಕದಿಂದ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ರಾಜ್ಯಪಾಲ, ಎ.ಎನ್. ಬ್ಯಾನರ್ಜಿ ಆದ ನಾನು, ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು, 1957ನ್ನು ಮತ್ತಷ್ಟು ತಿದ್ದುಪಡಿ ಮಾಡಲು ಈ ಮುಂದಿನ ನಿಯಮಗಳನ್ನು ಈ ಮೂಲಕ ರಚಿಸುತ್ತೇನೆ, ಎಂದರೆ:–

**1. ಹೆಸರು ಮತ್ತು ಪ್ರಾರಂಭ.–** (1) ಈ ನಿಯಮಗಳನ್ನು ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) (ಮೂರನೇ ತಿದ್ದುಪಡಿ) ನಿಯಮಗಳು, 1985 ಎಂದು ಕರೆಯತಕ್ಕದ್ದು.

(2) ಅವು, ಸರ್ಕಾರಿ ರಾಜ್ಯಪತ್ರದಲ್ಲಿ ಅವುಗಳನ್ನು ಪ್ರಕಟಿಸಿದ ದಿನಾಂಕದಂದು ಜಾರಿಗೆ ಬರತಕ್ಕದ್ದು.

**2. 18ನೇ ನಿಯಮದ ತಿದ್ದುಪಡಿ.–** ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು, 1957ರ 18ನೇ ನಿಯಮದಲ್ಲಿ, (3) ಉಪನಿಯಮದ ಮೊದಲನೇ ಪರಂತುಕದ ನಂತರ ಈ ಮುಂದಿನ ಪರಂತುಕವನ್ನು ಸೇರಿಸತಕ್ಕದ್ದು, ಎಂದರೆ:–

"ಮತ್ತೂ ಪರಂತು, ಯಾವ ಸರ್ಕಾರಿ ನೌಕರನಿಗೆ 8ನೇ ನಿಯಮದ (i) ರಿಂದ (ivಎ) ವರೆಗಿನ ಖಂಡಗಳಲ್ಲಿ ನಿರ್ದಿಷ್ಟಪಡಿಸಿರುವ ದಂಡನೆಗಳಲ್ಲಿ ಯಾವುದೇ ದಂಡನೆಯನ್ನು ವಿಧಿಸಿರುವ ಆದೇಶವನ್ನು, (v)ರಿಂದ (viii)ರ ವರೆಗಿನ ದಂಡನೆಗಳಲ್ಲಿ ಯಾವುದೇ ದಂಡನೆಯನ್ನು ವಿಧಿಸುವುದಕ್ಕೆ ಅಧಿಕಾರ ಹೊಂದಿದ ನೇಮಕ ಪ್ರಾಧಿಕಾರಿಯು ಅಥವಾ ಇತರ ಯಾರೇ ಶಿಸ್ತು ಪ್ರಾಧಿಕಾರಿಯು ಮಾಡಿರುವರೋ ಆ ಸರ್ಕಾರಿ ನೌಕರನು (v)ರಿಂದ (viii)ರ ವರೆಗಿನ ದಂಡನೆಗಳಲ್ಲಿ ಯಾವುದೇ ದಂಡನೆಯನ್ನು ಅವನಿಗೆ ವಿಧಿಸಿರುವ ಆದೇಶದ ವಿರುದ್ಧ ಯಾವ ಪ್ರಾಧಿಕಾರಿಗೆ ಅಪೀಲು ಸಲ್ಲಿಸಲು ಆತನು ಹಕ್ಕುಳ್ಳವನಾಗಿರುವನೋ ಅದೇ ಪ್ರಾಧಿಕಾರಿಗೆ ಅಪೀಲು ಸಲ್ಲಿಸಬಹುದು."

**ಕರ್ನಾಟಕ ರಾಜ್ಯಪಾಲರು**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜಿ.ಕೆ. ಸಂಗೋರಾಮ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ, (ಸೇವಾ ನಿಯಮಗಳು).

**ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ**

ಅಧಿಸೂಚನೆ ಸಂಖ್ಯೆ ಡಿಪಿಎಆರ್ 5 ಎಸ್‌ಡಿಇ 86, ಬೆಂಗಳೂರು, ದಿನಾಂಕ 7ನೇ ಮೇ, 1986

ಭಾರತ ಸಂವಿಧಾನದ 309ನೇ ಅನುಚ್ಛೇದದ ಪರಂತುಕದಿಂದ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ರಾಜ್ಯಪಾಲ, ಎ.ಎನ್. ಬ್ಯಾನರ್ಜಿ ಆದ ನಾನು, ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು, 1957ನ್ನು ಮತ್ತಷ್ಟು ತಿದ್ದುಪಡಿ ಮಾಡಲು ಈ ಮುಂದಿನ ನಿಯಮಗಳನ್ನು ಈ ಮೂಲಕ ರಚಿಸುತ್ತೇನೆ, ಎಂದರೆ:–

**1. ಹೆಸರು ಮತ್ತು ಪ್ರಾರಂಭ.**– (1) ಈ ನಿಯಮಗಳನ್ನು ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) (ಮೂರನೇ ತಿದ್ದುಪಡಿ) ನಿಯಮಗಳು, 1986 ಎಂದು ಕರೆಯತಕ್ಕದ್ದು.

(2) ಅವು, ಸರ್ಕಾರಿ ರಾಜ್ಯಪತ್ರದಲ್ಲಿ ಅವುಗಳನ್ನು ಪ್ರಕಟಿಸಿದ ದಿನಾಂಕದಂದು ಜಾರಿಗೆ ಬರತಕ್ಕದ್ದು.

**2. 11ನೇ ನಿಯಮದ ತಿದ್ದುಪಡಿ.**– ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು, 1957ರ (ಇಲ್ಲಿ ಇನ್ನು ಮುಂದೆ ಸದರಿ ನಿಯಮಗಳೆಂದು ಉಲ್ಲೇಖಿಸಲಾಗಿದೆ) 11ನೇ ನಿಯಮದಲ್ಲಿ,–

(i) (2)ನೇ ಉಪನಿಯಮಕ್ಕೆ, ಈ ಮುಂದಿನ ಪರಂತುಕಗಳನ್ನು ಸೇರಿಸತಕ್ಕದ್ದು, ಎಂದರೆ:–

"ಪರಂತು, ಲೋಕಾಯುಕ್ತರ ಅಥವಾ ಉಪಲೋಕಾಯುಕ್ತರ ನೇಮಕವನ್ನು ಸರ್ಕಾರದ ಹೊರತಾಗಿ ಇತರ ಯಾವುದೇ ಪ್ರಾಧಿಕಾರವು ಮಾಡತಕ್ಕದ್ದಲ್ಲ ಮತ್ತು ಲೋಕಾಯುಕ್ತರ ಸಿಬ್ಬಂದಿ ವರ್ಗದ ಅಧಿಕಾರಿಯ ನೇಮಕವನ್ನು ಲೋಕಾಯುಕ್ತರ ಪೂರ್ವ ಸಹಮತಿ ಇಲ್ಲದೆ ಮಾಡತಕ್ಕದ್ದಲ್ಲ."

(ii) (6)ನೇ ಉಪನಿಯಮದ ಪರಂತುಕದಲ್ಲಿ, "ಕರ್ನಾಟಕ ರಾಜ್ಯ ಜಾಗೃತ ಆಯೋಗದ ಒಬ್ಬ ಅಧಿಕಾರಿಯನ್ನು" ಎಂಬ ಪದಗಳ ಬದಲಾಗಿ, "ಲೋಕಾಯುಕ್ತರನ್ನು ಅಥವಾ ಉಪ ಲೋಕಾಯುಕ್ತರನ್ನು ಅಥವಾ ಲೋಕಾಯುಕ್ತ ಸಿಬ್ಬಂದಿಯ ಒಬ್ಬ ಅಧಿಕಾರಿಯನ್ನು" ಎಂಬ ಪದಗಳನ್ನು ಮತ್ತು "ಅಂಥ ಅಧಿಕಾರಿಯು" ಎಂಬ ಪದಗಳ ಬದಲಾಗಿ "ಲೋಕಾಯುಕ್ತರು, ಉಪಲೋಕಾಯುಕ್ತರು ಅಥವಾ ಅಂಥ ಅಧಿಕಾರಿಯು" ಎಂಬ ಪದಗಳನ್ನು ಸೇರಿಸತಕ್ಕದ್ದು.

**3. 12ಎ ನಿಯಮದ ತಿದ್ದುಪಡಿ.**– ಸದರಿ ನಿಯಮಗಳ 12ಎ ನಿಯಮದಲ್ಲಿ,–

(i) "ಜಾಗೃತ ಆಯೋಗವು" ಎಂಬ ಪದಗಳ ಬದಲಾಗಿ, "ಲೋಕಾಯುಕ್ತರು ಅಥವಾ ಉಪಲೋಕಾಯುಕ್ತರು" ಎಂಬ ಪದಗಳನ್ನು ಸೇರಿಸತಕ್ಕದ್ದು.

(ii) "ಜಾಗೃತ ಆಯುಕ್ತರ" ಎಂಬ ಪದಗಳ ಬದಲಾಗಿ "ಲೋಕಾಯುಕ್ತರ ಅಥವಾ ಸಂದರ್ಭಾನುಸಾರ ಉಪಲೋಕಾಯುಕ್ತರ" ಎಂಬ ಪದಗಳನ್ನು ಸೇರಿಸತಕ್ಕದ್ದು.

**4. 14ಎ ನಿಯಮಕ್ಕೆ ಬದಲಾಗಿ ಹೊಸ ನಿಯಮದ ಸೇರ್ಪಡೆ.**– ಸದರಿ ನಿಯಮಗಳ 14ಎ ನಿಯಮಕ್ಕೆ ಬದಲಾಗಿ, ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

**"14ಎ. ಲೋಕಾಯುಕ್ತಕ್ಕೆ ವಹಿಸಿಕೊಡಲಾದ ಪ್ರಕರಣಗಳಲ್ಲಿ ಕಾರ್ಯವಿಧಾನ:–**

(1) 9 ರಿಂದ 11ಎ ವರೆಗಿನ ನಿಯಮಗಳಲ್ಲಿ ಮತ್ತು 13ನೇ ನಿಯಮದಲ್ಲಿ ಏನೇ ಒಳಗೊಂಡಿದ್ದರೂ, (2)ನೇ ಉಪನಿಯಮದ ಉಪಬಂಧಗಳು, ಯಾವ ಸರ್ಕಾರಿ ನೌಕರರ ಮೇಲಣ ಆರೋಪಿಸಿದ ದುರ್ನಡತೆಯನ್ನು ಕರ್ನಾಟಕ ಲೋಕಾಯುಕ್ತ ಅಧಿನಿಯಮ, 1984ರ ಉಪಬಂಧಗಳ ಮೇರೆಗೆ ಅಥವಾ ಸರ್ಕಾರವು ಉಲ್ಲೇಖಿಸಿದ್ದರ ಮೇರೆಗೆ ಲೋಕಾಯುಕ್ತರು ಅಥವಾ ಉಪಲೋಕಾಯುಕ್ತರು ತನಿಖೆ ಮಾಡಿರುವರೋ ಆ ಸರ್ಕಾರಿ ನೌಕರರ ವಿರುದ್ಧ ಇರುವ ವ್ಯವಹರಣೆಗಳ ಉದ್ದೇಶಗಳಿಗಾಗಿ ಅನ್ವಯವಾಗತಕ್ಕದ್ದು.

(2) (ಎ) ಯಾವುದೇ ಆರೋಪದ ಬಗ್ಗೆ,–

(i) ರಾಜ್ಯ ಸಿವಿಲ್ ಸೇವೆಗಳು ಸಮೂಹ–'ಎ' ಯ ಅಥವಾ ಸಮೂಹ– 'ಬಿ' ಯ ಸದಸ್ಯನ, ಅಥವಾ

(ii) ರಾಜ್ಯ ಸಿವಿಲ್ ಸೇವೆಗಳ ಸಮೂಹ–ಎ ಯ ಅಥವಾ ಸಮೂಹ–ಬಿ ಯ ಸದಸ್ಯನ ಮತ್ತು ರಾಜ್ಯ ಸಿವಿಲ್ ಸೇವೆಗಳ ಸಮೂಹ–ಸಿ ಯ, ಅಥವಾ ಸಮೂಹ–ಡಿ ಯ ಸದಸ್ಯನ, ಅಥವಾ

(iii) ರಾಜ್ಯ ಸಿವಿಲ್ ಸೇವೆಗಳ ಸಮೂಹ–ಸಿ ಯ ಅಥವಾ ಸಮೂಹ–ಡಿ ಯ ಸದಸ್ಯನ

– ಸಂಬಂಧದಲ್ಲಿ ತನಿಖೆ ನಡೆಸಿದ ನಂತರ ಶಿಸ್ತು ವ್ಯವಹರಣೆಗಳನ್ನು ತೆಗೆದುಕೊಳ್ಳತಕ್ಕದ್ದೆಂದು ಲೋಕಾಯುಕ್ತರು ಅಥವಾ ಉಪಲೋಕಾಯುಕ್ತರು ಅಭಿಪ್ರಾಯಪಟ್ಟರೆ, ಅವರು ಸರ್ಕಾರಕ್ಕೆ ತಮ್ಮ ಶಿಫಾರಸುಗಳ ಜೊತೆಗೆ ತನಿಖೆಯ ದಾಖಲೆಯನ್ನು ಕಳುಹಿಸತಕ್ಕದ್ದು, ಮತ್ತು ಸರ್ಕಾರವು, ಅಂಥ ದಾಖಲೆಯನ್ನು ಪರೀಕ್ಷಿಸಿದ ತರುವಾಯ ಲೋಕಾಯುಕ್ತರು ಅಥವಾ ಉಪಲೋಕಾಯುಕ್ತರು ಪ್ರಕರಣದ ಬಗ್ಗೆ ವಿಚಾರಣೆಯನ್ನು ನಡೆಸುವಂತೆ ನಿರ್ದೇಶಿಸಬಹುದು ಅಥವಾ 12ನೇ ನಿಯಮದ ಅನುಸಾರವಾಗಿ ಕ್ರಮಕೈಗೊಳ್ಳುವಂತೆ ಸಮುಚಿತ ಶಿಸ್ತು ಪ್ರಾಧಿಕಾರಿಗೆ ನಿರ್ದೇಶಿಸಬಹುದು.

(ಬಿ) (ಎ) ಖಂಡದ ಮೇರೆಗೆ ಪ್ರಕರಣದ ವಿಚಾರಣೆಯನ್ನು ನಡೆಸಲು ಪ್ರಸ್ತಾವಿಸಿದ್ದರೆ, ಆ ವಿಚಾರಣೆಯನ್ನು, ಸಂದರ್ಭಾನುಸಾರ ಲೋಕಾಯುಕ್ತರು ಅಥವಾ ಉಪಲೋಕಾಯುಕ್ತರು ಅಥವಾ ವಿಚಾರಣೆಯನ್ನು ನಡೆಸಲು ಲೋಕಾಯುಕ್ತರು ಅಥವಾ ಉಪಲೋಕಾಯುಕ್ತರು ಅಧಿಕೃತಗೊಳಿಸಿದ ಲೋಕಾಯುಕ್ತ ಸಿಬ್ಬಂದಿ ವರ್ಗದ ಒಬ್ಬ ಅಧಿಕಾರಿಯು ನಡೆಸಬಹುದು:

ಪರಂತು, ಸರ್ಕಾರಿ ನೌಕರನಿಗೆ ಸಂಬಂಧಿಸಿದ ವಿಚಾರಣೆಯನ್ನು ಅಂಥ ಸರ್ಕಾರಿ ನೌಕರನ ದರ್ಜೆಗಿಂತ ಕೆಳಗಿನ ದರ್ಜೆಯ ಅಧಿಕಾರಿಯು ನಡೆಸತಕ್ಕದ್ದಲ್ಲ:

ಮತ್ತೂ ಪರಂತು, ಜಿಲ್ಲಾಧಿಕಾರಿಯ ದರ್ಜೆಗಿಂತ ಕಡಿಮೆಯಲ್ಲದ ದರ್ಜೆಯ ಸರ್ಕಾರಿ ನೌಕರನಿಗೆ ಸಂಬಂಧಿಸಿದ ವಿಚಾರಣೆಯನ್ನು ಲೋಕಾಯುಕ್ತ ಅಥವಾ ಉಪಲೋಕಾಯುಕ್ತ ಅಥವಾ ಹೆಚ್ಚುವರಿ ರಿಜಿಸ್ಟ್ರಾರ್ (ವಿಚಾರಣೆಗಳು) ಇವರ ಹೊರತು ಇತರ ಯಾರೇ ವ್ಯಕ್ತಿಯು ನಡೆಸತಕ್ಕದ್ದಲ್ಲ.

ಮತ್ತೂ ಪರಂತು, (ಬಿ) ಖಂಡದ ಮೇರೆಗೆ ವಿಚಾರಣೆಯನ್ನು ನಡೆಸುವುದಕ್ಕೆ ಅಧಿಕೃತನಾದ ಲೋಕಾಯುಕ್ತ ಸಿಬ್ಬಂದಿ ವರ್ಗದ ಒಬ್ಬ ಅಧಿಕಾರಿಗೆ ಅದನ್ನು ಸಂಪೂರ್ಣವಾಗಿ ಅಥವಾ ಭಾಗಶಃ ನಡೆಸಲು ಇನ್ನೊಬ್ಬ ಅಧಿಕಾರಿಯನ್ನು ನೇಮಿಸಲು ಅಧಿಕಾರವಿರತಕ್ಕದ್ದಲ್ಲ.

(ಸಿ) ಲೋಕಾಯುಕ್ತರು ಅಥವಾ ಉಪಲೋಕಾಯುಕ್ತರು ಅಥವಾ ವಿಚಾರಣೆಯನ್ನು ನಡೆಸಲು (ಬಿ) ಖಂಡದ ಮೇರೆಗೆ ಅಧಿಕೃತನಾದ ಅಧಿಕಾರಿಯು, ಅದನ್ನು 11ನೇ ನಿಯಮದ ಉಪಬಂಧಗಳಿಗೆ ಅನುಸಾರವಾಗಿ ಈ ನಿಯಮದ ಉಪಬಂಧಗಳಿಗೆ ಅವು ಅಸಂಗತವಾಗದಿರುವಷ್ಟರ ಮಟ್ಟಿಗೆ ನಡೆಸತಕ್ಕದ್ದು ಮತ್ತು ಆ ಉದ್ದೇಶಕ್ಕಾಗಿ ಸದರಿ ನಿಯಮದಲ್ಲಿ ಉಲ್ಲೇಖಿಸಿದ ಶಿಸ್ತು ಪ್ರಾಧಿಕಾರಿಯ ಅಧಿಕಾರಗಳನ್ನು ಹೊಂದಿರತಕ್ಕದ್ದು.

(ಡಿ) ವಿಚಾರಣೆಯು ಮುಗಿದ ತರುವಾಯ, ವಿಚಾರಣಾ ಅಧಿಕಾರಿಯ ನಿರ್ಣಯಗಳ ಮತ್ತು ಸಂದರ್ಭಾನುಸಾರ ಲೋಕಾಯುಕ್ತರ ಅಥವಾ ಉಪಲೋಕಾಯುಕ್ತರ ಶಿಫಾರಸುಗಳ ಜೊತೆಗೆ ಪ್ರಕರಣದ ದಾಖಲೆಯನ್ನು ಸರ್ಕಾರಕ್ಕೆ ಕಳುಹಿಸತಕ್ಕದ್ದು.

(ಇ) (ಡಿ) ಖಂಡದ ಮೇರೆಗಿನ ದಾಖಲೆಯನ್ನು ಸ್ವೀಕರಿಸಿದ ಮೇಲೆ, ಸರ್ಕಾರವು 11ನೇ ನಿಯಮದ (21)ನೇ ಉಪನಿಯಮದ ಮತ್ತು (23)ನೇ ಉಪನಿಯಮದ ಉಪಬಂಧಗಳ ಮತ್ತು 11ಎ ನಿಯಮದ ಉಪಬಂಧಗಳಿಗೆ ಅನುಸಾರವಾಗಿ ಕ್ರಮಕೈಗೊಳ್ಳತಕ್ಕದ್ದು ಮತ್ತು ಅಂಥ ಎಲ್ಲ ಪ್ರಕರಣಗಳಲ್ಲಿಯೂ 8ನೇ ನಿಯಮದಲ್ಲಿ ನಿರ್ದಿಷ್ಟಪಡಿಸಿದ ದಂಡನೆಗಳಲ್ಲಿ ಯಾವುದೇ ದಂಡನೆಯನ್ನು ವಿಧಿಸಲು ಸರ್ಕಾರವು ಸಕ್ಷಮ ಶಿಸ್ತು ಪ್ರಾಧಿಕಾರಿಯಾಗಿರತಕ್ಕದ್ದು.

(3) (1)ನೇ ಉಪನಿಯಮದಲ್ಲಿರುವುದು ಯಾವುದೂ, ಕರ್ನಾಟಕ ನ್ಯಾಯಾಂಗ ಸೇವೆಯ ಸದಸ್ಯರಿಗೆ ಅಥವಾ ಅಂಥ ಸದಸ್ಯರ ಅಥವಾ ಕರ್ನಾಟಕ ಉಚ್ಚ ನ್ಯಾಯಾಲಯದ ಆಡಳಿತ ನಿಯಂತ್ರಣದಲ್ಲಿರುವ ಸರ್ಕಾರಿ ನೌಕರನಿಗೆ ಅನ್ವಯವಾಗತಕ್ಕದ್ದಲ್ಲ.

**ವಿವರಣೆ.–** ಈ ನಿಯಮದಲ್ಲಿ, 'ಲೋಕಾಯುಕ್ತ' ಮತ್ತು 'ಉಪಲೋಕಾಯುಕ್ತ' ಎಂಬ ಪದಾವಳಿಯು, ಕರ್ನಾಟಕ ಲೋಕಾಯುಕ್ತ ಅಧಿನಿಯಮ, 1984ರಲ್ಲಿ ಅವುಗಳಿಗೆ ಅನುಕ್ರಮವಾಗಿ ಕೊಟ್ಟಿರುವ ಅರ್ಥವನ್ನೇ ಹೊಂದಿರತಕ್ಕದ್ದು.

**5. ಅನುಸೂಚಿ –IIರ ತಿದ್ದುಪಡಿ.–** ಸದರಿ ನಿಯಮಗಳ ಅನುಸೂಚಿ– II ರಲ್ಲಿ "ಕರ್ನಾಟಕ ರಾಜ್ಯ ಜಾಗೃತ ಆಯೋಗ" ಎಂಬ ಶೀರ್ಷಿಕೆಯ ಮತ್ತು ಅದಕ್ಕೆ ಸಂಬಂಧಿಸಿದ ನಮೂದುಗಳ ಬದಲಾಗಿ, ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

**"ಲೋಕಾಯುಕ್ತ ಸಿಬ್ಬಂದಿ"**

| | | | | |
|---|---|---|---|---|
| ಕಚೇರಿ ಅಧೀಕ್ಷಕ, ಪ್ರಥಮ ದರ್ಜೆ ಗುಮಾಸ್ತರು, ಶೀಘ್ರಲಿಪಿಗಾರರು, ದ್ವಿತೀಯ ದರ್ಜೆ ಗುಮಾಸ್ತರು, ಬೆರಳಚ್ಚುಗಾರರು, ವಾಹನ ಚಾಲಕರು ಮತ್ತು ಇತರ ಎಲ್ಲ – ಸಿ ಸಮೂಹದ ಹುದ್ದೆಗಳು | ರಿಜಿಸ್ಟ್ರಾರ್ | ರಿಜಿಸ್ಟ್ರಾರ್ | (ii)ರಿಂದ (viii)ವರೆಗೆ | ಲೋಕಾಯುಕ್ತ" |

**6. ಅನುಸೂಚಿ–IIIರ ತಿದ್ದುಪಡಿ.–** ಸದರಿ ನಿಯಮಗಳ ಅನುಸೂಚಿ–IIIರಲ್ಲಿ "ಕರ್ನಾಟಕ ರಾಜ್ಯ ಜಾಗೃತ ಆಯೋಗ" ಎಂಬ ಶೀರ್ಷಿಕೆಗೆ ಮತ್ತು ಅದಕ್ಕೆ ಸಂಬಂಧಪಟ್ಟ ನಮೂದುಗಳಿಗೆ ಬದಲಾಗಿ ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

**"ಲೋಕಾಯುಕ್ತ ಸಿಬ್ಬಂದಿ"**

| | | | | |
|---|---|---|---|---|
| ಅಟೆಂಡರುಗಳು, ಜಮೇದಾರರು ಕ್ಲೀನರ್‌ಗಳು ಮತ್ತು ಎಲ್ಲ ಇತರ –ಡಿ ಸಮೂಹದ ಹುದ್ದೆಗಳು | ರಿಜಿಸ್ಟ್ರಾರ್ | ರಿಜಿಸ್ಟ್ರಾರ್ | (i)ರಿಂದ (viii)ವರೆಗೆ | ಲೋಕಾಯುಕ್ತ" |

**ಕರ್ನಾಟಕ ರಾಜ್ಯಪಾಲರು**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜಿ.ಕೆ. ಸಂಗೋರಾಮ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ,

(ಸೇವಾ ನಿಯಮಗಳು).

**ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ**

**ಅಧಿಸೂಚನೆ**

ಸಂಖ್ಯೆ ಡಿಪಿಎಆರ್ 4 ಎಸ್‌ಡಿಇ 87, ಬೆಂಗಳೂರು, ದಿನಾಂಕ 5ನೇ ಮೇ, 1987

ಭಾರತ ಸಂವಿಧಾನದ 309ನೇ ಅನುಚ್ಛೇದದ ಪರಂತುಕದಿಂದ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ರಾಜ್ಯಪಾಲ, ಎ.ಎನ್. ಬ್ಯಾನರ್ಜಿ ಆದ ನಾನು, ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು, 1957, ಇದನ್ನು ಮತ್ತಷ್ಟು ತಿದ್ದುಪಡಿ ಮಾಡಲು ಈ ಮುಂದಿನ ನಿಯಮಗಳನ್ನು ಈ ಮೂಲಕ ರಚಿಸುತ್ತೇನೆ, ಎಂದರೆ:–

**1. ಹೆಸರು ಮತ್ತು ಪ್ರಾರಂಭ.**– (1) ಈ ನಿಯಮಗಳನ್ನು ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) (ನಾಲ್ಕನೇ ತಿದ್ದುಪಡಿ) ನಿಯಮಗಳು, 1986 ಎಂದು ಕರೆಯತಕ್ಕದ್ದು.

(2) ಅವು, ಸರ್ಕಾರಿ ರಾಜ್ಯಪತ್ರದಲ್ಲಿ ಅವುಗಳನ್ನು ಪ್ರಕಟಿಸಿದ ದಿನಾಂಕದಂದು ಜಾರಿಗೆ ಬರತಕ್ಕದ್ದು.

**2. 5ನೇ ನಿಯಮದ ತಿದ್ದುಪಡಿ.**– ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು, 1957ರ 5ನೇ ನಿಯಮದಲ್ಲಿ (3)ನೇ ಉಪನಿಯಮಕ್ಕೆ ಮತ್ತು ಅದರ ಅಡಿಯಲ್ಲಿ ಇರುವ ವಿವರಣೆಗೆ ಬದಲಾಗಿ ಈ ಮುಂದಿನದನ್ನು ಸೇರಿಸತಕ್ಕದ್ದು ಮತ್ತು 1986ರ ಜುಲೈ 1 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ ಎಂದು ಭಾವಿಸತಕ್ಕದ್ದು, ಎಂದರೆ:–

"(3) (ಎ) ರಾಜ್ಯ ಸಿವಿಲ್ ಸೇವೆಗಳ ಸಮೂಹ 'ಎ' ಯು ರೂ. 2200–50–2300–75–2900–90–3350–100–3950–120–4070ರ ಮತ್ತು ಅದಕ್ಕೂ ಮೇಲ್ಪಟ್ಟು ವೇತನ ಶ್ರೇಣಿಗಳನ್ನು ಹೊಂದಿರುವ ಹುದ್ದೆಗಳನ್ನು ಒಳಗೊಂಡಿರತಕ್ಕದ್ದು.

(ಬಿ) ರಾಜ್ಯ ಸಿವಿಲ್ ಸೇವೆಗಳ ಸಮೂಹ 'ಬಿ' ಯು ರೂ. 1720–40–1800–50–2300–75–2900–90–3170ರ ಮತ್ತು ಅದಕ್ಕೂ ಮೇಲ್ಪಟ್ಟ ವೇತನ ಶ್ರೇಣಿಗಳನ್ನು, ಆದರೆ, ರೂ. 2200–50–2300–75–2900–90–3350–100–3950–120–4070ಕ್ಕಿಂತ ಕೆಳಗಿನ ವೇತನ ಶ್ರೇಣಿಯನ್ನು ಹೊಂದಿರುವ ಹುದ್ದೆಗಳನ್ನು ಒಳಗೊಂಡಿರತಕ್ಕದ್ದು.

(ಸಿ) ರಾಜ್ಯ ಸಿವಿಲ್ ಸೇವೆಗಳ ಸಮೂಹ 'ಸಿ' ಯು ರೂ.780–15–900–20–1040ರ ವೇತನ ಶ್ರೇಣಿಗಿಂತ ಮೇಲ್ಪಟ್ಟ ವೇತನ ಶ್ರೇಣಿಗಳನ್ನು ಆದರೆ, ರೂ. 1720–40–1800–50–2300–75–2900–90–3170 ಕ್ಕಿಂತ ಕೆಳಗಿನ ವೇತನ ಶ್ರೇಣಿಯನ್ನು ಹೊಂದಿರುವ, ಆದರೆ ಅನುಸೂಚಿ– IVರಲ್ಲಿ ನಿರ್ದಿಷ್ಟಪಡಿಸಿರುವ ಹುದ್ದೆಗಳನ್ನು ಹೊರತುಪಡಿಸಿದ ಹುದ್ದೆಗಳನ್ನು ಒಳಗೊಂಡಿರತಕ್ಕದ್ದು, ಮತ್ತು

(ಡಿ) ರಾಜ್ಯ ಸಿವಿಲ್ ಸೇವೆಗಳ ಸಮೂಹ 'ಡಿ' ಯು ಅನುಸೂಚಿ– IVರಲ್ಲಿ ನಿರ್ದಿಷ್ಟಪಡಿಸಿರುವ ಹುದ್ದೆಗಳನ್ನು ಮತ್ತು ರೂ. 780–15–900–20–1040ರ ವೇತನ ಶ್ರೇಣಿಯನ್ನು ಹೊಂದಿರುವ ಹುದ್ದೆಗಳನ್ನು ಒಳಗೊಂಡಿರತಕ್ಕದ್ದು".

**ವಿವರಣೆ.**– ಈ ಉಪನಿಯಮದ ಉದ್ದೇಶಗಳಿಗಾಗಿ "ವೇತನ ಶ್ರೇಣಿ" ಎಂದರೆ ಕರ್ನಾಟಕ ಸಿವಿಲ್ ಸೇವಾ (ಪರಿಷ್ಕೃತ ವೇತನ) ನಿಯಮಗಳು, 1957ರಲ್ಲಿ ವಿವಿಧ ಹುದ್ದೆಗಳಿಗೆ ಸಂಬಂಧಿಸಿದಂತೆ ನಿಗದಿಪಡಿಸಿದ ಪರಿಷ್ಕೃತ ವೇತನ ಶ್ರೇಣಿ.

**ಕರ್ನಾಟಕ ರಾಜ್ಯಪಾಲರು**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜಿ.ಕೆ. ಸಂಗೋರಾಮ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ,

(ಸೇವಾ ನಿಯಮಗಳು).

**ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ**

ಅಧಿಸೂಚನೆ ಸಂಖ್ಯೆ ಡಿಪಿಎಆರ್ 14 ಎಸ್‌ಡಿಇ 87, ಬೆಂಗಳೂರು,

ದಿನಾಂಕ 5ನೇ ಡಿಸೆಂಬರ್, 1987

ಭಾರತ ಸಂವಿಧಾನದ 309ನೇ ಅನುಚ್ಛೇದದ ಪರಂತುಕದಿಂದ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ರಾಜ್ಯಪಾಲ, ಎ.ಎನ್. ಬ್ಯಾನರ್ಜಿ ಆದ ನಾನು, ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು, 1957ನ್ನು ಮತ್ತಷ್ಟು ತಿದ್ದುಪಡಿ ಮಾಡಲು ಈ ಮುಂದಿನ ನಿಯಮಗಳನ್ನು ಈ ಮೂಲಕ ರಚಿಸುತ್ತೇನೆ, ಎಂದರೆ:–

**1. ಹೆಸರು ಮತ್ತು ಪ್ರಾರಂಭ.**– (1) ಈ ನಿಯಮಗಳನ್ನು ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) (ನಾಲ್ಕನೇ ತಿದ್ದುಪಡಿ) ನಿಯಮಗಳು, 1987 ಎಂದು ಕರೆಯತಕ್ಕದ್ದು.

(2) ಅವು, ಸರ್ಕಾರಿ ರಾಜ್ಯಪತ್ರದಲ್ಲಿ ಅವುಗಳನ್ನು ಪ್ರಕಟಿಸಿದ ದಿನಾಂಕದಂದು ಜಾರಿಗೆ ಬರತಕ್ಕದ್ದು.

**2. 15ನೇ ನಿಯಮದ ತಿದ್ದುಪಡಿ.**– ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು, 1957ರ 15ನೇ ನಿಯಮದಲ್ಲಿ, (2)ನೇ ಉಪನಿಯಮದ ನಂತರ, ಈ ಮುಂದಿನ ಉಪನಿಯಮವನ್ನು ಸೇರಿಸತಕ್ಕದ್ದು, ಎಂದರೆ:–

"(3) (1) ಮತ್ತು (2)ನೇ ಉಪನಿಯಮಗಳಲ್ಲಿ ಏನೇ ಒಳಗೊಂಡಿದ್ದರೂ, ಜಿಲ್ಲಾ ಪರಿಷತ್ತಿನ ಮುಖ್ಯ ಕಾರ್ಯದರ್ಶಿಯು ರಾಜ್ಯ ಸಿವಿಲ್ ಸೇವೆಗಳ ಸಮೂಹ 'ಸಿ' ಅಥವಾ ಸಮೂಹ 'ಡಿ" ಸದಸ್ಯನಾಗಿರುವ ಅಥವಾ ಸಮೂಹ 'ಸಿ' ಅಥವಾ ಸಮೂಹ 'ಡಿ' ಹುದ್ದೆಯನ್ನು ಹೊಂದಿರುವ ಮತ್ತು ಯಾರ ಸೇವೆಯನ್ನು ಜಿಲ್ಲಾ ಪರಿಷತ್ತಿಗೆ ಎರವಲು ನೀಡಲಾಗಿದೆಯೋ ಅಂಥ ಸರ್ಕಾರಿ ನೌಕರನನ್ನು ಅಮಾನತ್ತಿನಲ್ಲಿಡುವ ಉದ್ದೇಶಕ್ಕಾಗಿ ನೇಮಕ ಪ್ರಾಧಿಕಾರಿಯ ಅಧಿಕಾರಗಳನ್ನು ಹೊಂದಿರತಕ್ಕದ್ದು. ಜಿಲ್ಲಾ ಪರಿಷತ್ತಿನ ಮುಖ್ಯ ಕಾರ್ಯದರ್ಶಿಯು ಅಂಥ ಸರ್ಕಾರಿ ನೌಕರನ ಮೇಲೆ 8ನೇ ನಿಯಮದ ಖಂಡ (i) ರಿಂದ (ivಎ) ವರೆಗೆ ನಿರ್ದಿಷ್ಟಪಡಿಸಿರುವ ದಂಡನೆಗಳಲ್ಲಿ ಯಾವುದೇ ದಂಡನೆಯನ್ನು ವಿಧಿಸಲು ಸಹ ಅಧಿಕಾರಗಳನ್ನು ಹೊಂದಿರತಕ್ಕದ್ದು. ಜಿಲ್ಲಾಪರಿಷತ್ತಿನ ಮುಖ್ಯ ಕಾರ್ಯದರ್ಶಿಯು ಸರ್ಕಾರಿ ನೌಕರನನ್ನು ಅಮಾನತ್ತಿನಲ್ಲಿಡುವುದಕ್ಕೆ ಅಥವಾ ದಂಡನೆಯನ್ನು ವಿಧಿಸುವುದಕ್ಕೆ ಮುಂಚೆ ಎರವಲು ಕೊಟ್ಟಿರುವ ಪ್ರಾಧಿಕಾರಿಯ ಅನುಮೋದನೆಯನ್ನು ಪಡೆಯುವ ಅಥವಾ ಅವರೊಂದಿಗೆ ಸಮಾಲೋಚನೆ ನಡೆಸುವ ಅಗತ್ಯವಿರತಕ್ಕದ್ದಲ್ಲ".

**ಕರ್ನಾಟಕ ರಾಜ್ಯಪಾಲರು**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜಿ.ಕೆ. ಸಂಗೋರಾಮ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ,

(ಸೇವಾ ನಿಯಮಗಳು).

**ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ**

ಅಧಿಸೂಚನೆ ಸಂಖ್ಯೆ ಡಿಪಿಎಆರ್ 29 ಎಸ್‌ಡಿಇ 87, ಬೆಂಗಳೂರು, ದಿನಾಂಕ 22ನೇ ಜನವರಿ, 1988

ಭಾರತ ಸಂವಿಧಾನದ 309ನೇ ಅನುಚ್ಛೇದದ ಪರಂತುಕದಿಂದ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ರಾಜ್ಯಪಾಲ, ಎ.ಎನ್. ಬ್ಯಾನರ್ಜಿ ಆದ ನಾನು, ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು, 1957ನ್ನು ಮತ್ತಷ್ಟು ತಿದ್ದುಪಡಿ ಮಾಡಲು ಈ ಮುಂದಿನ ನಿಯಮಗಳನ್ನು ಈ ಮೂಲಕ ರಚಿಸುತ್ತೇನೆ, ಎಂದರೆ:–

**1. ಹೆಸರು ಮತ್ತು ಪ್ರಾರಂಭ.–** (1) ಈ ನಿಯಮಗಳನ್ನು ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) (ಎರಡನೇ ತಿದ್ದುಪಡಿ) ನಿಯಮಗಳು, 1988 ಎಂದು ಕರೆಯತಕ್ಕದ್ದು.

(2) ಅವು, ಸರ್ಕಾರಿ ರಾಜ್ಯಪತ್ರದಲ್ಲಿ ಅವುಗಳನ್ನು ಪ್ರಕಟಿಸಿದ ದಿನಾಂಕದಂದು ಜಾರಿಗೆ ಬರತಕ್ಕದ್ದು.

**2. 15ನೇ ನಿಯಮದ ತಿದ್ದುಪಡಿ.–** ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು, 1957ರ 15ನೇ ನಿಯಮದಲ್ಲಿ, (2)ನೇ ಉಪನಿಯಮದ ನಂತರ, ಈ ಮುಂದಿನ ಉಪನಿಯಮವನ್ನು ಸೇರಿಸತಕ್ಕದ್ದು, ಎಂದರೆ:–

"(2ಎ) (1) ಮತ್ತು (2)ನೇ ಉಪನಿಯಮಗಳಲ್ಲಿ ಏನೇ ಒಳಗೊಂಡಿದ್ದರೂ, ಜಿಲ್ಲಾ ಪರಿಷತ್ತಿನ ಮುಖ್ಯ ಕಾರ್ಯದರ್ಶಿಯು ರಾಜ್ಯ ಸಿವಿಲ್ ಸೇವೆಗಳ ಸಮೂಹ 'ಬಿ' ಯ ಸದಸ್ಯನಾಗಿರುವ ಅಥವಾ ಸಮೂಹ 'ಬಿ' ಹುದ್ದೆಯನ್ನು ಹೊಂದಿರುವ ಮತ್ತು ಜಿಲ್ಲಾ ಪರಿಷತ್ತಿಗೆ ಎರವಲು ಸೇವೆಯ ಮೇಲೆ ಬಂದಿರುವ ಸರ್ಕಾರಿ ನೌಕರನ ಮೇಲೆ 8ನೇ ನಿಯಮದ (ii)ರಿಂದ (iiiಎ) ವರೆಗಿನ ಖಂಡಗಳಲ್ಲಿ ನಿರ್ದಿಷ್ಟಪಡಿಸಿದ ದಂಡನೆಗಳಲ್ಲಿ ಯಾವುದೇ ದಂಡನೆಯನ್ನು ವಿಧಿಸುವುದಕ್ಕಾಗಿ ನೇಮಕ ಪ್ರಾಧಿಕಾರಿಯ ಅಧಿಕಾರಗಳನ್ನು ಹೊಂದಿರತಕ್ಕದ್ದು. ಮುಖ್ಯ ಕಾರ್ಯದರ್ಶಿಯು ದಂಡನೆಯನ್ನು ವಿಧಿಸುವುದಕ್ಕೆ ಮುಂಚೆ ಎರವಲು ಕೊಟ್ಟ ಅಧಿಕಾರಿಯ ಅನುಮೋದನೆಯನ್ನು ಪಡೆಯುವ ಅಥವಾ ಅವರೊಂದಿಗೆ ಸಮಾಲೋಚನೆ ನಡೆಸುವ ಅಗತ್ಯವಿರತಕ್ಕದ್ದಲ್ಲ."

**ಕರ್ನಾಟಕ ರಾಜ್ಯಪಾಲರು**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜಿ.ಕೆ. ಸಂಗೋರಾಮ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ,

(ಸೇವಾ ನಿಯಮಗಳು).

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆಗಳ ಸಚಿವಾಲಯ**

ಅಧಿಸೂಚನೆ ಸಂಖ್ಯೆ ಡಿಪಿಎಆರ್ 33 ಎಸ್‌ಡಿಇ 88, ಬೆಂಗಳೂರು, ದಿನಾಂಕ 10ನೇ ಫೆಬ್ರವರಿ, 1989

ಭಾರತ ಸಂವಿಧಾನದ 309ನೇ ಅನುಚ್ಛೇದದ ಪರಂತುಕದಿಂದ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ರಾಜ್ಯಪಾಲರು, ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು, 1957ನ್ನು ಮತ್ತಷ್ಟು ತಿದ್ದುಪಡಿ ಮಾಡಲು ಈ ಮುಂದಿನ ನಿಯಮಗಳನ್ನು ಈ ಮೂಲಕ ರಚಿಸುತ್ತಾರೆ, ಎಂದರೆ:–

**1. ಹೆಸರು ಮತ್ತು ಪ್ರಾರಂಭ.–** (1) ಈ ನಿಯಮಗಳನ್ನು ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) (ತಿದ್ದುಪಡಿ) ನಿಯಮಗಳು, 1989 ಎಂದು ಕರೆಯತಕ್ಕದ್ದು.

(2) ಅವು, ಸರ್ಕಾರಿ ರಾಜ್ಯಪತ್ರದಲ್ಲಿ ಅವುಗಳನ್ನು ಪ್ರಕಟಿಸಿದ ದಿನಾಂಕದಂದು ಜಾರಿಗೆ ಬರತಕ್ಕದ್ದು.

**2. 15ನೇ ನಿಯಮದ ತಿದ್ದುಪಡಿ.–** ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು, 1957ರ (ಇಲ್ಲಿ ಇನ್ನು ಮುಂದೆ ಸದರಿ ನಿಯಮಗಳೆಂದು ಉಲ್ಲೇಖಿಸಲಾಗಿದೆ) 15ನೇ ನಿಯಮದಲ್ಲಿ, (3)ನೇ ಉಪನಿಯಮಕ್ಕೆ ಈ ಮುಂದಿನ ಪರಂತುಕವನ್ನು ಸೇರಿಸತಕ್ಕದ್ದು, ಎಂದರೆ:–

"ಪರಂತು, ಈ ಉಪ ನಿಯಮದ ಮೇರೆಗೆ ಮಾಡಿದ ಆದೇಶದ ವಿರುದ್ಧ ಅಪೀಲನ್ನು, ಆ ಸರ್ಕಾರಿ ನೌಕರನನ್ನು ಯಾವ ಇಲಾಖೆಯಿಂದ ಜಿಲ್ಲಾ ಪರಿಷತ್ತಿಗೆ ಎರವಲು ಸೇವೆಯ ಮೇಲೆ ನೀಡಲಾಗಿದೆಯೋ ಆ ಇಲಾಖೆಯ ಮುಖ್ಯಸ್ಥನಿಗೆ ಸಲ್ಲಿಸತಕ್ಕದ್ದು".

**3. 18ನೇ ನಿಯಮದ ತಿದ್ದುಪಡಿ.–** ಸದರಿ ನಿಯಮಗಳ 18ನೇ ನಿಯಮದ (3)ನೇ ಉಪನಿಯಮದಲ್ಲಿ, ಮೂರನೇ ಪರಂತುಕದ ತರುವಾಯ ಈ ಮುಂದಿನ ಪರಂತುಕವನ್ನು ಸೇರಿಸತಕ್ಕದ್ದು, ಎಂದರೆ:–

"ಮತ್ತೂ ಪರಂತು, ರಾಜ್ಯ ಸಿವಿಲ್ ಸೇವೆಗಳ ಸಮೂಹ 'ಸಿ'ಯ ಅಥವಾ ಸಮೂಹ 'ಡಿ'ಯ ಸದಸ್ಯನು, 8ನೇ ನಿಯಮದಲ್ಲಿ ನಿರ್ದಿಷ್ಟಪಡಿಸಿದ ದಂಡನೆಗಳಲ್ಲಿ ಯಾವುದೇ ದಂಡನೆಯನ್ನು ವಿಧಿಸಿ ಸರ್ಕಾರವು ಮಾಡಿದ ಯಾವುದೇ ಆದೇಶದ ವಿರುದ್ಧ ರಾಜ್ಯಪಾಲರಿಗೆ ಅಪೀಲು ಸಲ್ಲಿಸಬಹುದು".

**ಕರ್ನಾಟಕ ರಾಜ್ಯಪಾಲರು**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜಿ.ಕೆ. ಸಂಗೋರಾಮ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ,

(ಸೇವಾ ನಿಯಮಗಳು).

**ಕರ್ನಾಟಕ ಸರ್ಕಾರ**

ಸಂಖ್ಯೆ: ಡಿಪಿಎಆರ್ 16 ಎಸ್‌ಡಿಇ 90

ಕರ್ನಾಟಕ ಸರ್ಕಾರದ ಸಚಿವಾಲಯ

ವಿಧಾನ ಸೌಧ,

ಬೆಂಗಳೂರು, ದಿನಾಂಕ 23ನೇ ಅಕ್ಟೋಬರ್ 1990.

**ಅಧಿಸೂಚನೆ**

ಭಾರತ ಸಂವಿಧಾನದ 309ನೇ ಅನುಚ್ಛೇದದ ಪರಂತುಕದಿಂದ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ರಾಜ್ಯಪಾಲರು, ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು, 1957ನ್ನು ಮತ್ತಷ್ಟು ತಿದ್ದುಪಡಿ ಮಾಡಲು ಈ ಮುಂದಿನ ನಿಯಮಗಳನ್ನು ಈ ಮೂಲಕ ರಚಿಸುತ್ತಾರೆ, ಎಂದರೆ:–

**1. ಹೆಸರು ಮತ್ತು ಪ್ರಾರಂಭ.–** (1) ಈ ನಿಯಮಗಳನ್ನು ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) (ತಿದ್ದುಪಡಿ) ನಿಯಮಗಳು, 1990 ಎಂದು ಕರೆಯತಕ್ಕದ್ದು.

(2) ಅವು, ಸರ್ಕಾರಿ ರಾಜ್ಯಪತ್ರದಲ್ಲಿ ಅವುಗಳನ್ನು ಪ್ರಕಟಿಸಿದ ದಿನಾಂಕದಂದು ಜಾರಿಗೆ ಬರತಕ್ಕದ್ದು.

**2. 8ನೇ ನಿಯಮದ ತಿದ್ದುಪಡಿ.–** ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು, 1957ರ, (ಇಲ್ಲಿ ಇನ್ನು ಮುಂದೆ ಸದರಿ ನಿಯಮಗಳೆಂದು ಉಲ್ಲೇಖಿಸಲಾಗಿದೆ) 8ನೇ ನಿಯಮದಲ್ಲಿ, ವಿವರಣೆ–Iರ ಬದಲಾಗಿ ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

"**ವಿವರಣೆ–I.–** ಈ ಪರಂತುಕದ ಉದ್ದೇಶಗಳಿಗಾಗಿ "ಭ್ರಷ್ಟಾಚಾರ" ಎಂಬ ಪದಾವಳಿಯು ಭ್ರಷ್ಟಾಚಾರ ಪ್ರತಿಬಂಧ ಅಧಿನಿಯಮ, 1988 (ಕೇಂದ್ರ ಅಧಿನಿಯಮ 1988ರ 49)ರ 13ನೇ ಪ್ರಕರಣದಲ್ಲಿ "ಲೋಕ ನೌಕರನಿಂದ ಅಪರಾಧಿಕ ದುರ್ನಡತೆ" ಎಂಬ ಪದಾವಳಿಗೆ ಕೊಟ್ಟಿರುವ ಅರ್ಥವನ್ನೇ ಹೊಂದಿರತಕ್ಕದ್ದು.

**3. IIನೇ ಅನುಸೂಚಿಯ ತಿದ್ದುಪಡಿ .–** ಸದರಿ ನಿಯಮಗಳ IIನೇ ಅನುಸೂಚಿಯಲ್ಲಿ "ಕರ್ನಾಟಕ ಸರ್ಕಾರದ ಸಚಿವಾಲಯ" ಎಂಬ ಶೀರ್ಷಿಕೆಯ ಅಡಿಯಲ್ಲಿ ಇರುವ ನಮೂದುಗಳ ಬದಲಾಗಿ ಈ ಮುಂದಿನ ನಮೂದುಗಳನ್ನು ಸೇರಿಸತಕ್ಕದ್ದು, ಎಂದರೆ:–

| ಹುದ್ದೆಗಳ ವರ್ಗ | ನೇಮಕ ಮಾಡಲು ಅಧಿಕಾರವುಳ್ಳ ಪ್ರಾಧಿಕಾರಿ | ದಂಡನೆಗಳನ್ನು ವಿಧಿಸಲು ಅಧಿಕಾರವುಳ್ಳ ಪ್ರಾಧಿಕಾರಿ ಮತ್ತು ಅವರು ವಿಧಿಸಬಹುದಾದ ದಂಡನೆಗಳು | | ಅಪೀಲು ಪ್ರಾಧಿಕಾರಿ |
|---|---|---|---|---|
| | | ಪ್ರಾಧಿಕಾರಿ | ದಂಡನೆಗಳು | |
| 1 | 2 | 3 | 4 | 5 |
| ಸಚಿವಾಲಯದ ಎಲ್ಲ ಇಲಾಖೆಗಳ ಹಿರಿಯ ಸಹಾಯಕರು, ಸಹಾಯಕರು, ಶೀಘ್ರಲಿಪಿಗಾರರು, ಕಿರಿಯ ಸಹಾಯಕರು, ಬೆರಳಚ್ಚುಗಾರರು ಮತ್ತು ಇತರೆ ಎಲ್ಲ ಸಮೂಹ 'ಸಿ' ಹುದ್ದೆಗಳು (ಸಚಿವ ಸಂಪುಟ ವ್ಯವಹಾರಗಳ ಇಲಾಖೆ ಮತ್ತು ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ ಮತ್ತು ಸ್ಥಾನಿಕ ಆಯುಕ್ತರು, ಕರ್ನಾಟಕ, ನವದೆಹಲಿ ಇವರ ಕಚೇರಿಯಲ್ಲಿರುವವರನ್ನು ಹೊರತುಪಡಿಸಿ) | ಮುಖ್ಯ ಕಾರ್ಯದರ್ಶಿ | ಸರ್ಕಾರದ ಸಂಬಂಧಪಟ್ಟ ಉಪಕಾರ್ಯದರ್ಶಿ, ಜಂಟಿ ಕಾರ್ಯದರ್ಶಿ, ಅಪರ ಕಾರ್ಯದರ್ಶಿ<br><br>ಸರ್ಕಾರದ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ<br><br>ಮುಖ್ಯ ಕಾರ್ಯದರ್ಶಿ | (ii)ರಿಂದ (ivಎ)<br><br>(ii)ರಿಂದ (ivಎ)<br><br>(v)ರಿಂದ (viii) | ಮುಖ್ಯ ಕಾರ್ಯದರ್ಶಿ<br><br>ಮುಖ್ಯ ಕಾರ್ಯದರ್ಶಿ<br><br>ಸರ್ಕಾರ |
| ಸಚಿವ ಸಂಪುಟ ವ್ಯವಹಾರಗಳ ಇಲಾಖೆ ಮತ್ತು ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆಯ ಹಿರಿಯ ಸಹಾಯಕರು, ಸಹಾಯಕರು, ಶೀಘ್ರಲಿಪಿಗಾರರು, ಕಿರಿಯ ಸಹಾಯಕರು, ಬೆರಳಚ್ಚುಗಾರರು, ಟೈಪ್ ರೈಟರ್ ಮೆಕ್ಯಾನಿಕ್, ಸೂಪರ್ ವೈಸರ್ (ಪಹರೆ ಮತ್ತು ಕಾವಲು), ಟೆಲಿಫೋನ್ ಆಪರೇಟರುಗಳು ಮತ್ತು ಎಲ್ಲಾ ಇತರೆ ಸಮೂಹ 'ಸಿ' ಹುದ್ದೆಗಳು | ಮುಖ್ಯ ಕಾರ್ಯದರ್ಶಿ | ಸರ್ಕಾರದ ಉಪ ಕಾರ್ಯದರ್ಶಿ, ಸಚಿವ ಸಂಪುಟ ವ್ಯವಹಾರಗಳ ಇಲಾಖೆ ಮತ್ತು ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ<br><br>ಮುಖ್ಯ ಕಾರ್ಯದರ್ಶಿ | (ii)ರಿಂದ (ivಎ)<br><br>(v)ರಿಂದ (viii) | ಮುಖ್ಯ ಕಾರ್ಯದರ್ಶಿ<br><br>ಸರ್ಕಾರ |
| ಸ್ಥಾನಿಕ ಆಯುಕ್ತರು, ಕರ್ನಾಟಕ, ನವದೆಹಲಿ, ಇವರ ಕಚೇರಿಯ ಹಿರಿಯ ಸಹಾಯಕರು, ಸಹಾಯಕರು, ಶೀಘ್ರಲಿಪಿಗಾರರು, ಗುಮಾಸ್ತ ಹಾಗೂ ಬೆರಳಚ್ಚುಗಾರರು ಮತ್ತು ಎಲ್ಲ ಇತರೆ ಸಮೂಹ 'ಸಿ' ಹುದ್ದೆಗಳು | ಸ್ಥಾನಿಕ ಆಯುಕ್ತರು, ಕರ್ನಾಟಕ | ಸಂಪರ್ಕ ಅಧಿಕಾರಿ<br><br>ಸ್ಥಾನಿಕ ಆಯುಕ್ತರು, ಕರ್ನಾಟಕ | (ii)ರಿಂದ (ivಎ)<br><br>(v)ರಿಂದ (viii) | ಸ್ಥಾನಿಕ ಆಯುಕ್ತರು, ಕರ್ನಾಟಕ<br><br>ಮುಖ್ಯ ಕಾರ್ಯದರ್ಶಿ |
| ಸಚಿವರ / ರಾಜ್ಯ ಸಚಿವರ ಆಪ್ತ ಶಾಖೆಯ ಎಲ್ಲಾ ಅಧಿಕಾರಿಗಳು | ಮುಖ್ಯ ಕಾರ್ಯದರ್ಶಿ | ಸರ್ಕಾರದ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ<br><br>ಮುಖ್ಯ ಕಾರ್ಯದರ್ಶಿ | (ii)ರಿಂದ (ivಎ)<br><br>(ii)ರಿಂದ (viii) | ಮುಖ್ಯ ಕಾರ್ಯದರ್ಶಿ<br><br>ಸರ್ಕಾರ |

**ವಿವರಣೆ.–**

(i) "ಸಂಬಂಧಪಟ್ಟ ಸರ್ಕಾರದ ಉಪಕಾರ್ಯದರ್ಶಿ/ ಜಂಟಿಕಾರ್ಯದರ್ಶಿ/ ಅಪರ ಕಾರ್ಯದರ್ಶಿ" ಎಂದರೆ ಈ ನಿಯಮಗಳ ಮೇರೆಗೆ ಕ್ರಮಕೈಗೊಳ್ಳುವ ಕಾಲದಲ್ಲಿ ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆಯನ್ನು ಹೊರತುಪಡಿಸಿ, ಅಧಿಕಾರಿಯು ಯಾವ ಇಲಾಖೆಯಲ್ಲಿ ಸೇವೆ ಸಲ್ಲಿಸುತ್ತಿರುವನೋ ಆ ಇಲಾಖೆಯ ಆಡಳಿತ ಪ್ರಭಾರದಲ್ಲಿರುವ ಸರ್ಕಾರದ ಉಪ ಕಾರ್ಯದರ್ಶಿ/ ಜಂಟಿ ಕಾರ್ಯದರ್ಶಿ/ ಅಪರ ಕಾರ್ಯದರ್ಶಿ ಎಂದು ಅರ್ಥ.

(ii) "ಸರ್ಕಾರದ ಉಪಕಾರ್ಯದರ್ಶಿ, ಸಚಿವ ಸಂಪುಟ ವ್ಯವಹಾರಗಳ ಇಲಾಖೆ ಮತ್ತು ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ" ಎಂದರೆ, ಅಂಕಣ–1 ರಲ್ಲಿ ನಿರ್ದಿಷ್ಟಪಡಿಸಿದ ಅಧಿಕಾರಿಗಳ ಸೇವಾ ಷರತ್ತುಗಳಿಗೆ ಸಂಬಂಧಿಸಿದ ವಿಷಯಗಳ ಪ್ರಭಾರದಲ್ಲಿರುವ ಸರ್ಕಾರದ ಉಪ ಕಾರ್ಯದರ್ಶಿ, ಸಚಿವ ಸಂಪುಟ ವ್ಯವಹಾರಗಳ ಇಲಾಖೆ ಮತ್ತು ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ.

2. **ಅನುಸೂಚಿ–IIIರ ತಿದ್ದುಪಡಿ.–** ಸದರಿ ನಿಯಮಗಳ ಅನುಸೂಚಿ IIIರಲ್ಲಿ "ಕರ್ನಾಟಕ ಸರ್ಕಾರ ಸಚಿವಾಲಯ" ಎಂಬ ಶೀರ್ಷಿಕೆಯ ಅಡಿಯಲ್ಲಿ ಬರುವ ನಮೂದುಗಳ ಬದಲಾಗಿ, ಈ ಮುಂದಿನ ನಮೂದುಗಳನ್ನು ಸೇರಿಸತಕ್ಕದ್ದು, ಎಂದರೆ:–

| 1 | 2 | 3 | 4 | 5 |
|---|---|---|---|---|
| ಸಚಿವಾಲಯದ ಎಲ್ಲ ಇಲಾಖೆಗಳಲ್ಲಿರುವ ಎಲ್ಲ ಸಮೂಹ 'ಡಿ' ಹುದ್ದೆಗಳು (ಸಚಿವ ಸಂಪುಟ ವ್ಯವಹಾರಗಳ ಇಲಾಖೆಯ ಮತ್ತು ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ ಮತ್ತು ಸ್ಥಾನಿಕ ಆಯುಕ್ತರು, ಕರ್ನಾಟಕ, ನವದೆಹಲಿ ಇವರ ಕಚೇರಿಯಲ್ಲಿರುವವರನ್ನು ಹೊರತುಪಡಿಸಿ) | ಅಧೀನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ | ಸಂಬಂಧಪಟ್ಟ ಅಧೀನ ಕಾರ್ಯದರ್ಶಿ | (ii)ರಿಂದ (ivಎ) | ಸರ್ಕಾರದ ಸಂಬಂಧಪಟ್ಟ ಕಾರ್ಯದರ್ಶಿ |
| | | ಅಧೀನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ | (v)ರಿಂದ (viii) | ಮುಖ್ಯ ಕಾರ್ಯದರ್ಶಿ |
| ಸಚಿವ ಸಂಪುಟ ವ್ಯವಹಾರಗಳ ಇಲಾಖೆ ಮತ್ತು ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆಯಲ್ಲಿರುವ ಎಲ್ಲ ಸಮೂಹ 'ಡಿ' ಹುದ್ದೆಗಳು | ಅಧೀನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ | ಸಂಬಂಧಪಟ್ಟ ಅಧೀನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ | (i)ರಿಂದ (ivಎ) | ಉಪ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ |
| | | ಅಧೀನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ | (v)ರಿಂದ (viii) | ಮುಖ್ಯ ಕಾರ್ಯದರ್ಶಿ |
| ಸ್ಥಾನಿಕ ಆಯುಕ್ತರು, ಕರ್ನಾಟಕ, ನವದೆಹಲಿ ಇವರ ಕಚೇರಿಯಲ್ಲಿರುವ ಡಿಸ್ಪ್ಯಾಚ್ ರೈಡರ್, ಜವಾನರು ಮತ್ತು ಎಲ್ಲ ಇತರೆ ಸಮೂಹ–ಡಿ ಹುದ್ದೆಗಳು | ಸ್ಥಾನಿಕ ಆಯುಕ್ತರು ಕರ್ನಾಟಕ | ಸಂಪರ್ಕ ಅಧಿಕಾರಿ | (i)ರಿಂದ (ivಎ) | ಸ್ಥಾನಿಕ ಆಯುಕ್ತರು |
| | | ಸ್ಥಾನಿಕ ಆಯುಕ್ತರು | (v)ರಿಂದ (viii) | ಮುಖ್ಯ ಕಾರ್ಯದರ್ಶಿ |

**ಸಚಿವರ / ರಾಜ್ಯ ಸಚಿವರ ಆಪ್ತ ಸಿಬ್ಬಂದಿ**

| | | | | |
|---|---|---|---|---|
| ಎಲ್ಲ ಸಮೂಹ 'ಡಿ' ಹುದ್ದೆಗಳು | ಅಧೀನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ | ಸಚಿವರ/ ರಾಜ್ಯ ಸಚಿವರ ಆಪ್ತ ಕಾರ್ಯದರ್ಶಿ | (i)ರಿಂದ (ivಎ) | ಉಪ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ |
| | | ಅಧೀನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ | (v)ರಿಂದ (viii) | ಸರ್ಕಾರದ ಮುಖ್ಯ ಕಾರ್ಯದರ್ಶಿ |

**ಕರ್ನಾಟಕ ಸರ್ಕಾರದ ಸಚಿವಾಲಯದಿಂದ ಮುಖ್ಯ ಚುನಾವಣಾ ಅಧಿಕಾರಿಯ ಕಚೇರಿಗೆ ಪ್ರತಿನಿಯೋಜಿಸಲಾಗಿರುವ ಸಿಬ್ಬಂದಿ**

| | | | | |
|---|---|---|---|---|
| ಎಲ್ಲ 'ಡಿ' ಸಮೂಹದ ಹುದ್ದೆಗಳು | ಅಧೀನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ | ಅಧೀನ ಕಾರ್ಯದರ್ಶಿ (ಚುನಾವಣೆಗಳು) | (i)ರಿಂದ (ivಎ) | ಮುಖ್ಯ ಚುನಾವಣಾ ಅಧಿಕಾರಿ |
| | | ಮುಖ್ಯ ಚುನಾವಣಾ ಅಧಿಕಾರಿ | (v)ರಿಂದ (viii) | ಮುಖ್ಯ ಕಾರ್ಯದರ್ಶಿ |

**ವಿವರಣೆ.–**

(i) "ಅಧೀನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ" ಎಂದರೆ, ಕರ್ನಾಟಕ ಸರ್ಕಾರದ ಸಚಿವಾಲಯದ ಸಮೂಹ 'ಡಿ' ನೌಕರರ ಸೇವಾ ಷರತ್ತುಗಳಿಗೆ ಸಂಬಂಧಪಟ್ಟ ವಿಷಯಗಳ ಪ್ರಭಾರದಲ್ಲಿರುವ ಸರ್ಕಾರದ ಅಧೀನ ಕಾರ್ಯದರ್ಶಿ, ಸಚಿವ ಸಂಪುಟ ವ್ಯವಹಾರಗಳ ಇಲಾಖೆ ಮತ್ತು ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ;

(ii) "ಸಂಬಂಧಪಟ್ಟ ಅಧೀನ ಕಾರ್ಯದರ್ಶಿ" ಎಂದರೆ ಈ ನಿಯಮಗಳ ಮೇರೆಗೆ ಕ್ರಮ ಕೈಗೊಳ್ಳುವ ಕಾಲದಲ್ಲಿ, ಸಚಿವ ಸಂಪುಟ ವ್ಯವಹಾರಗಳ ಇಲಾಖೆ ಮತ್ತು ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆಯನ್ನು ಹೊರತುಪಡಿಸಿ ಸಂಬಂಧಪಟ್ಟ ಸಮೂಹ 'ಡಿ' ನೌಕರನು ಸಚಿವಾಲಯದ ಯಾವುದೇ ಇಲಾಖೆಯಲ್ಲಿನ ಸರ್ಕಾರದ ಅಧೀನ ಕಾರ್ಯದರ್ಶಿಗೆ ಅಧೀನನಾಗಿರುವನೋ ಆ ಸಂಬಂಧಪಟ್ಟ ಅಧೀನ ಕಾರ್ಯದರ್ಶಿ ಹಾಗೂ ಸರ್ಕಾರದ ಕಾರ್ಯದರ್ಶಿಯ, ಅಪರ ಕಾರ್ಯದರ್ಶಿಯ, ಜಂಟಿ ಕಾರ್ಯದರ್ಶಿಯ ಮತ್ತು ಉಪ ಕಾರ್ಯದರ್ಶಿಯ ಆಪ್ತ ಶಾಖೆಯ ಸಮೂಹ 'ಡಿ' ನೌಕರರ ಸಂದರ್ಭದಲ್ಲಿ ಆ ಇಲಾಖೆಯ ಸಿಬ್ಬಂದಿ ವರ್ಗದ ವಿಷಯಗಳ ಪ್ರಭಾರದಲ್ಲಿರುವ ಅಧೀನ ಕಾರ್ಯದರ್ಶಿ;

(iii) "ಉಪಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ" ಎಂದರೆ 1ನೇ ಅಂಕಣದಲ್ಲಿ ನಿರ್ದಿಷ್ಟಪಡಿಸಿರುವ ನೌಕರರ ಸೇವಾ ಷರತ್ತುಗಳಿಗೆ ಸಂಬಂಧಿಸಿದ ವಿಷಯದ ಪ್ರಭಾರದಲ್ಲಿರುವ ಸರ್ಕಾರದ ಉಪ ಕಾರ್ಯದರ್ಶಿ, ಸಚಿವ ಸಂಪುಟ ವ್ಯವಹಾರಗಳ ಇಲಾಖೆ ಮತ್ತು ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ.

(iv) "ಸಂಬಂಧಪಟ್ಟ ಸರ್ಕಾರದ ಕಾರ್ಯದರ್ಶಿ" ಎಂದರೆ, ಈ ನಿಯಮಗಳ ಮೇರೆಗೆ ಕ್ರಮ ಕೈಗೊಳ್ಳುವ ಕಾಲದಲ್ಲಿ ನೌಕರನು ಯಾವ ಇಲಾಖೆಯಲ್ಲಿ ಕೆಲಸ ಮಾಡುತ್ತಿರುವನೋ ಆ ಇಲಾಖೆಯ ಕಾರ್ಯದರ್ಶಿ".

**ಕರ್ನಾಟಕ ರಾಜ್ಯಪಾಲರು**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಕೆ. ನಾಡಗಿರ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ

(ಸೇವಾ ನಿಯಮಗಳು).

**ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ**

ಅಧಿಸೂಚನೆ ಸಂಖ್ಯೆ ಡಿಪಿಎಆರ್ 5 ಎಸ್‌ಡಿಇ 92, ಬೆಂಗಳೂರು, ದಿನಾಂಕ 13ನೇ ಮೇ, 1993.

ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು, 1957ನ್ನು ಮತ್ತಷ್ಟು ತಿದ್ದುಪಡಿ ಮಾಡಲು ಈ ಮುಂದಿನ ನಿಯಮಗಳ ಕರಡನ್ನು, ಅದರಿಂದ ಬಾಧಿತರಾಗುವ ಸಂಭವವಿರುವ ಎಲ್ಲಾ ವ್ಯಕ್ತಿಗಳಿಂದ, ಸರ್ಕಾರಿ ರಾಜ್ಯಪತ್ರದಲ್ಲಿ ಅದನ್ನು ಪ್ರಕಟಿಸಿದ

ದಿನಾಂಕದಿಂದ 30 ದಿನಗಳೊಳಗಾಗಿ ಆಕ್ಷೇಪಣೆಗಳನ್ನು ಮತ್ತು ಸಲಹೆಗಳನ್ನು ಆಹ್ವಾನಿಸಿ, ಕರ್ನಾಟಕ ರಾಜ್ಯ ಸಿವಿಲ್ ಸೇವಾ ಅಧಿನಿಯಮ, 1978 (ಕರ್ನಾಟಕ ಅಧಿನಿಯಮ 1990ರ 14)ರ 3ನೇ ಪ್ರಕರಣದ (2)ನೇ ಉಪಪ್ರಕರಣದ ಮೂಲಕ ಅಗತ್ಯಪಡಿಸಲಾದಂತೆ, ದಿನಾಂಕ 9ನೇ ಮಾರ್ಚ್ 1993ರ ಕರ್ನಾಟಕ ವಿಶೇಷ ರಾಜ್ಯಪತ್ರದ ಭಾಗ–IV, ವಿಭಾಗ 2ಸಿ(i) ರಲ್ಲಿ ಅಧಿಸೂಚನೆ ಸಂಖ್ಯೆ ಡಿಪಿಎಆರ್ 5 ಎಸ್‌ಡಿಇ 92, ದಿನಾಂಕ 1993ರ ಫೆಬ್ರವರಿ 8 ರಲ್ಲಿ ಪ್ರಕಟಿಸಿರುವುದರಿಂದ;

ಮತ್ತು ಸದರಿ ರಾಜ್ಯಪತ್ರವನ್ನು 1993ರ ಮಾರ್ಚ್ 9 ರಂದು ಸಾರ್ವಜನಿಕರಿಗೆ ಲಭ್ಯವಾಗುವಂತೆ ಮಾಡಿರುವುದರಿಂದ;

ಮತ್ತು ಸದರಿ ಕರಡು ನಿಯಮಗಳ ಬಗ್ಗೆ ರಾಜ್ಯ ಸರ್ಕಾರವು ಸ್ವೀಕರಿಸಿದ ಸಲಹೆಗಳನ್ನು ಮತ್ತು ಆಕ್ಷೇಪಣೆಗಳನ್ನು ಪರಿಗಣಿಸಿರುವುದರಿಂದ;

ಈಗ ಕರ್ನಾಟಕ ರಾಜ್ಯ ಸಿವಿಲ್ ಸೇವಾ ಅಧಿನಿಯಮ, 1978 (ಕರ್ನಾಟಕ ಅಧಿನಿಯಮ 1990ರ 14)ರ 8ನೇ ಪ್ರಕರಣದೊಂದಿಗೆ ಓದಿಕೊಂಡ 3ನೇ ಪ್ರಕರಣದ (1)ನೇ ಉಪಪ್ರಕರಣದಿಂದ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಈ ಮೂಲಕ ಈ ಮುಂದಿನ ನಿಯಮಗಳನ್ನು ರಚಿಸುತ್ತದೆ, ಎಂದರೆ:–

**1. ಹೆಸರು ಮತ್ತು ಪ್ರಾರಂಭ.**– (1) ಈ ನಿಯಮಗಳನ್ನು ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) (ತಿದ್ದುಪಡಿ) ನಿಯಮಗಳು, 1993 ಎಂದು ಕರೆಯತಕ್ಕದ್ದು.

(2) ಅವು, ಸರ್ಕಾರಿ ರಾಜ್ಯಪತ್ರದಲ್ಲಿ ಅವುಗಳನ್ನು ಪ್ರಕಟಿಸಿದ ದಿನಾಂಕದಂದು ಜಾರಿಗೆ ಬರತಕ್ಕದ್ದು.

**2. 26ನೇ ನಿಯಮದ ತಿದ್ದುಪಡಿ.**– ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು, 1957ರ 26ನೇ ನಿಯಮದಲ್ಲಿ ಅದರ ಉಪನಿಯಮ (1) ಎಂದು ಸಂಖ್ಯೆ ನೀಡತಕ್ಕದ್ದು, ಮತ್ತು ಹಾಗೆ ಮರುಸಂಖ್ಯೆ ನೀಡಲಾದ (1)ನೇ ಉಪನಿಯಮದ ತರುವಾಯ ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

"(2) ಪುನರವಲೋಕನಕ್ಕಾಗಿ ಯಾವುದೇ ಅರ್ಜಿಯನ್ನು ಪುನರವಲೋಕನಕ್ಕೆ ಒಳಪಡುವಂಥ ಆ ಆದೇಶವನ್ನು ಮಾಡಿದ ದಿನಾಂಕದಿಂದ ಮೂರು ವರ್ಷಗಳ ಅವಧಿಯೊಳಗೆ ಸಲ್ಲಿಸಿದ ಹೊರತು ಅಂಗೀಕರಿಸತಕ್ಕದ್ದಲ್ಲ :

ಪರಂತು, ಸರ್ಕಾರಿ ನೌಕರನು ಸಕಾಲದಲ್ಲಿ ಪುನರವಲೋಕನ ಅರ್ಜಿ ಸಲ್ಲಿಸದಿರುವುದಕ್ಕೆ ಸಾಕಷ್ಟು ಕಾರಣವಿತ್ತೆಂದು ರಾಜ್ಯಪಾಲರಿಗೆ ಮನದಟ್ಟಾದರೆ, ಸದರಿ ಅವಧಿಯು ಮುಕ್ತಾಯವಾದ ನಂತರವೂ ಅವರು ಪುನರವಲೋಕನ ಅರ್ಜಿಯನ್ನು ಅಂಗೀಕರಿಸಬಹುದು."

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕಣ್ಣನ್ ಕುಟ್ಟಿ ಕುಳವಿಲ**

ಸರ್ಕಾರದ ಅಧೀನ ಕಾರ್ಯದರ್ಶಿ–II

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ,

(ಸೇವಾ ನಿಯಮಗಳು).

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

ಅಧಿಸೂಚನೆ ಸಂಖ್ಯೆ ಡಿಪಿಎಆರ್ 11 ಎಸ್‌ಡಿಇ 93, ಬೆಂಗಳೂರು, ದಿನಾಂಕ 3ನೇ ಜನವರಿ, 1994.

ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು, 1957ನ್ನು ಮತ್ತಷ್ಟು ತಿದ್ದುಪಡಿ ಮಾಡಲು ಈ ಮುಂದಿನ ನಿಯಮಗಳ ಕರಡನ್ನು, ಅದರಿಂದ ಬಾಧಿತರಾಗುವ ಸಂಭವವಿರುವ ಎಲ್ಲಾ ವ್ಯಕ್ತಿಗಳಿಂದ, ಸರ್ಕಾರಿ ರಾಜ್ಯಪತ್ರದಲ್ಲಿ ಅದನ್ನು ಪ್ರಕಟಿಸಿದ ದಿನಾಂಕದಿಂದ 30 ದಿನಗಳೊಳಗಾಗಿ ಆಕ್ಷೇಪಣೆಗಳನ್ನು ಮತ್ತು ಸಲಹೆಗಳನ್ನು ಆಹ್ವಾನಿಸಿ, ಕರ್ನಾಟಕ ರಾಜ್ಯ ಸಿವಿಲ್ ಸೇವಾ ಅಧಿನಿಯಮ, 1978 (ಕರ್ನಾಟಕ ಅಧಿನಿಯಮ 1990ರ 14)ರ 3ನೇ ಪ್ರಕರಣದ (2)ನೇ ಉಪಪ್ರಕರಣದ ಮೂಲಕ ಅಗತ್ಯಪಡಿಸಲಾದಂತೆ, ದಿನಾಂಕ 17ನೇ ನವೆಂಬರ್ 1993ರ ಕರ್ನಾಟಕ ವಿಶೇಷ ರಾಜ್ಯಪತ್ರದ ಭಾಗ–IV, ವಿಭಾಗ 2ಸಿ (i) ರಲ್ಲಿ ಅಧಿಸೂಚನೆ ಸಂಖ್ಯೆ ಡಿಪಿಎಆರ್ 11, ಎಸ್‌ಡಿಇ 93, ದಿನಾಂಕ 11ನೇ ನವೆಂಬರ್ 1993 ರಲ್ಲಿ ಪ್ರಕಟಿಸಿರುವುದರಿಂದ;

ಮತ್ತು, ಸದರಿ ರಾಜ್ಯಪತ್ರವನ್ನು 1993ರ ನವೆಂಬರ್ 17 ರಂದು ಸಾರ್ವಜನಿಕರಿಗೆ ಲಭ್ಯವಾಗುವಂತೆ ಮಾಡಿರುವುದರಿಂದ;

ಮತ್ತು, ಸದರಿ ಕರಡು ನಿಯಮಗಳ ಬಗ್ಗೆ ರಾಜ್ಯ ಸರ್ಕಾರಕ್ಕೆ ಯಾವುವೇ ಸಲಹೆಗಳು ಮತ್ತು ಆಕ್ಷೇಪಣೆಗಳು ಬಾರದಿರುವುದರಿಂದ;

ಈಗ ಕರ್ನಾಟಕ ರಾಜ್ಯ ಸಿವಿಲ್ ಸೇವಾ ಅಧಿನಿಯಮ, 1978 (ಕರ್ನಾಟಕ ಅಧಿನಿಯಮ 1990ರ 14)ರ 8ನೇ ಪ್ರಕರಣದೊಂದಿಗೆ ಓದಿಕೊಂಡ 3ನೇ ಪ್ರಕರಣದ (1)ನೇ ಉಪಪ್ರಕರಣದಿಂದ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು, ಈ ಮೂಲಕ ಈ ಮುಂದಿನ ನಿಯಮಗಳನ್ನು ರಚಿಸುತ್ತದೆ, ಎಂದರೆ:–

**1. ಹೆಸರು ಮತ್ತು ಪ್ರಾರಂಭ.**– (1) ಈ ನಿಯಮಗಳನ್ನು ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು)(ತಿದ್ದುಪಡಿ) ನಿಯಮಗಳು, 1993 ಎಂದು ಕರೆಯತಕ್ಕದ್ದು.

(2) ಅವು, ಸರ್ಕಾರಿ ರಾಜ್ಯಪತ್ರದಲ್ಲಿ ಅವುಗಳನ್ನು ಪ್ರಕಟಿಸಿದ ದಿನಾಂಕದಂದು ಜಾರಿಗೆ ಬರತಕ್ಕದ್ದು.

**2. 15ನೇ ನಿಯಮದ ತಿದ್ದುಪಡಿ.**– ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು, 1957ರ 15ನೇ ನಿಯಮದಲ್ಲಿ, (2ಎ) ಮತ್ತು (3)ನೇ ಉಪನಿಯಮಗಳಲ್ಲಿ "ಮುಖ್ಯ ಕಾರ್ಯದರ್ಶಿಯವರು" ಮತ್ತು "ಜಿಲ್ಲಾ ಪರಿಷತ್ತಿಗೆ" ಎಂಬ ಪದಗಳ ಬದಲಾಗಿ

ಅವು ಬರುವ ಕಡೆಯಲ್ಲೆಲ್ಲಾ "ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಯು" ಮತ್ತು "ಜಿಲ್ಲಾ ಪಂಚಾಯತಿಗೆ" ಎಂಬ ಪದಗಳನ್ನು ಅನುಕ್ರಮವಾಗಿ ಸೇರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕಣ್ಣನ್ ಕುಟ್ಟಿ ಕುಳವಿಲ**

ಸರ್ಕಾರದ ಅಧೀನ ಕಾರ್ಯದರ್ಶಿ–II

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ, (ಸೇವಾ ನಿಯಮಗಳು).

**ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ**

ಅಧಿಸೂಚನೆ ಸಂಖ್ಯೆ ಡಿಪಿಎಆರ್ 5 ಎಸ್‌ಡಿಇ 94, ಬೆಂಗಳೂರು, ದಿನಾಂಕ 13ನೇ ಜುಲೈ 1994

ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು, 1957ನ್ನು ಮತ್ತಷ್ಟು ತಿದ್ದುಪಡಿ ಮಾಡಲು ಈ ಮುಂದಿನ ನಿಯಮಗಳ ಕರಡನ್ನು, ಅದರಿಂದ ಬಾಧಿತರಾಗುವ ಸಂಭವವಿರುವ ಎಲ್ಲಾ ವ್ಯಕ್ತಿಗಳಿಂದ, ಸರ್ಕಾರಿ ರಾಜ್ಯಪತ್ರದಲ್ಲಿ ಅದನ್ನು ಪ್ರಕಟಿಸಿದ ದಿನಾಂಕದಿಂದ 30 ದಿನಗಳೊಳಗಾಗಿ ಆಕ್ಷೇಪಣೆಗಳನ್ನು ಮತ್ತು ಸಲಹೆಗಳನ್ನು ಆಹ್ವಾನಿಸಿ, ಕರ್ನಾಟಕ ರಾಜ್ಯ ಸಿವಿಲ್ ಸೇವಾ ಅಧಿನಿಯಮ, 1978 (ಕರ್ನಾಟಕ ಅಧಿನಿಯಮ 1990ರ 14)ರ 3ನೇ ಪ್ರಕರಣದ (2)ನೇ ಉಪಪ್ರಕರಣದ ಮೂಲಕ ಅಗತ್ಯಪಡಿಸಲಾದಂತೆ, ದಿನಾಂಕ 7ನೇ ಜೂನ್, 1994ರ ಕರ್ನಾಟಕ ವಿಶೇಷ ರಾಜ್ಯಪತ್ರದ ಭಾಗ–IV, ವಿಭಾಗ 2(ಸಿ) (i) ರಲ್ಲಿ ಅಧಿಸೂಚನೆ ಸಂಖ್ಯೆ ಡಿಪಿಎಆರ್ 5 ಎಸ್‌ಡಿಇ 94, ದಿನಾಂಕ 3ನೇ ಜೂನ್ 1994 ರಲ್ಲಿ ಪ್ರಕಟಿಸಿರುವುದರಿಂದ;

ಮತ್ತು, ಸದರಿ ರಾಜ್ಯಪತ್ರವನ್ನು 1994ರ ಜೂನ್ 7 ರಂದು ಸಾರ್ವಜನಿಕರಿಗೆ ಲಭ್ಯವಾಗುವಂತೆ ಮಾಡಿರುವುದರಿಂದ;

ಮತ್ತು, ಸದರಿ ಕರಡು ನಿಯಮಗಳ ಬಗ್ಗೆ ರಾಜ್ಯ ಸರ್ಕಾರವು ಸ್ವೀಕರಿಸಿರುವ ಸಲಹೆಗಳನ್ನು ಅಥವಾ ಆಕ್ಷೇಪಣೆಗಳನ್ನು ಪರಿಗಣಿಸಿರುವುದರಿಂದ;

ಈಗ ಕರ್ನಾಟಕ ರಾಜ್ಯ ಸಿವಿಲ್ ಸೇವಾ ಅಧಿನಿಯಮ, 1978 (ಕರ್ನಾಟಕ ಅಧಿನಿಯಮ 1990ರ 14)ರ 8ನೇ ಪ್ರಕರಣದೊಂದಿಗೆ ಓದಿಕೊಂಡ 3ನೇ ಪ್ರಕರಣದ (1)ನೇ ಉಪಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಈ ಮೂಲಕ ಈ ಮುಂದಿನ ನಿಯಮಗಳನ್ನು ರಚಿಸುತ್ತದೆ, ಎಂದರೆ:–

**1. ಹೆಸರು ಮತ್ತು ಪ್ರಾರಂಭ.**– (1) ಈ ನಿಯಮಗಳನ್ನು ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) (ತಿದ್ದುಪಡಿ) ನಿಯಮಗಳು, 1994 ಎಂದು ಕರೆಯತಕ್ಕದ್ದು.

(2) ಅವು, ಸರ್ಕಾರಿ ರಾಜ್ಯಪತ್ರದಲ್ಲಿ ಅವುಗಳನ್ನು ಪ್ರಕಟಿಸಿದ ದಿನಾಂಕದಂದು ಜಾರಿಗೆ ಬರತಕ್ಕದ್ದು.

**2. 5ನೇ ನಿಯಮದ ತಿದ್ದುಪಡಿ.**– ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು, 1957ರ 5ನೇ ನಿಯಮದಲ್ಲಿ, (3)ನೇ ಉಪನಿಯಮಕ್ಕೆ ಮತ್ತು ಅದರ ಅಡಿಯಲ್ಲಿ ಇರುವ ವಿವರಣೆಯ ಬದಲಾಗಿ ಈ ಮುಂದಿನದನ್ನು 1993ರ ಜುಲೈ 1 ರಿಂದ ಜಾರಿಗೆ ಬರುವಂತೆ ಸೇರಿಸತಕ್ಕದ್ದು ಮತ್ತು ಸೇರಿಸಲಾಗಿದೆಯೆಂದು ಭಾವಿಸತಕ್ಕದ್ದು, ಎಂದರೆ:–

"(3) (ಎ) ರಾಜ್ಯ ಸಿವಿಲ್ ಸೇವೆಗಳ ಸಮೂಹ 'ಎ' ಯು ರೂ. 2375–75–2900–100–3700–125–4450ರ ಮತ್ತು ಅದಕ್ಕೂ ಮೇಲ್ಪಟ್ಟ ವೇತನ ಶ್ರೇಣಿಗಳನ್ನು, ಹೊಂದಿರುವ ಹುದ್ದೆಗಳನ್ನು ಒಳಗೊಂಡಿರತಕ್ಕದ್ದು.

(ಬಿ) ರಾಜ್ಯ ಸಿವಿಲ್ ಸೇವೆಗಳ ಸಮೂಹ 'ಬಿ' ಯು ರೂ. 1900–50–2300–75–2900–100–3700ರ ಮತ್ತು ಅದಕ್ಕೂ ಮೇಲ್ಪಟ್ಟ ವೇತನ ಶ್ರೇಣಿಗಳನ್ನು, ಆದರೆ ರೂ. 2375–75–2900–100–3700–125–4450 ಕ್ಕಿಂತ ಕೆಳಗಿನ ವೇತನ ಶ್ರೇಣಿಯನ್ನು ಹೊಂದಿರುವ ಹುದ್ದೆಗಳನ್ನು ಒಳಗೊಂಡಿರತಕ್ಕದ್ದು.

(ಸಿ) ರಾಜ್ಯ ಸಿವಿಲ್ ಸೇವೆಗಳ ಸಮೂಹ "ಸಿ" ಯು ರೂ. 840–15–900–20–1100–30–1340ರ ವೇತನ ಶ್ರೇಣಿಗಿಂತ ಮೇಲ್ಪಟ್ಟ ವೇತನ ಶ್ರೇಣಿಗಳನ್ನು, ಆದರೆ ರೂ. 1900–50–2300–75–2900–100–3700 ಕ್ಕಿಂತ ಕೆಳಗಿನ ವೇತನ ಶ್ರೇಣಿಯನ್ನು ಹೊಂದಿರುವ, ಆದರೆ, ಅನುಸೂಚಿ–IV ರಲ್ಲಿ ನಿರ್ದಿಷ್ಟಪಡಿಸಿರುವ ಹುದ್ದೆಗಳನ್ನು ಹೊರತುಪಡಿಸಿದ ಹುದ್ದೆಗಳನ್ನು ಒಳಗೊಂಡಿರತಕ್ಕದ್ದು; ಮತ್ತು

(ಡಿ) ರಾಜ್ಯ ಸಿವಿಲ್ ಸೇವೆಗಳ ಸಮೂಹ "ಡಿ" ಯು ಅನುಸೂಚಿ–IV ರಲ್ಲಿ ನಿರ್ದಿಷ್ಟಪಡಿಸಿರುವ ಹುದ್ದೆಗಳನ್ನು ಮತ್ತು ರೂ. 840–15–900–1100–30–1340ರ ವೇತನ ಶ್ರೇಣಿಯನ್ನು ಹೊಂದಿರುವ ಹುದ್ದೆಗಳನ್ನು ಒಳಗೊಂಡಿರತಕ್ಕದ್ದು.

**ವಿವರಣೆ.**– ಈ ಉಪನಿಯಮದ ಉದ್ದೇಶಗಳಿಗಾಗಿ "ವೇತನ ಶ್ರೇಣಿ" ಎಂದರೆ ಕರ್ನಾಟಕ ಸಿವಿಲ್ ಸೇವಾ (ಪರಿಷ್ಕೃತ ವೇತನ) ನಿಯಮಗಳು, 1994 ರಲ್ಲಿ ಮತ್ತು ಸಂಬಂಧಿಸಿದ ಆದೇಶಗಳಲ್ಲಿ ಹೇಳಿರುವ ವಿವಿಧ ಹುದ್ದೆಗಳಿಗೆ ಸಂಬಂಧಿಸಿದಂತೆ ನಿಗದಿಪಡಿಸಿದ ಪರಿಷ್ಕೃತ ವೇತನ ಶ್ರೇಣಿ."

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕಣ್ಣನ್ ಕುಟ್ಟಿ ಕುಳವಿಲ**

ಸರ್ಕಾರದ ಅಧೀನ ಕಾರ್ಯದರ್ಶಿ–II

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ, (ಸೇವಾ ನಿಯಮಗಳು).

**ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ**

ಅಧಿಸೂಚನೆ ಸಂಖ್ಯೆ ಡಿಪಿಎಆರ್ 8 ಎಸ್‌ಡಿಇ 93, ಬೆಂಗಳೂರು, ದಿನಾಂಕ 22ನೇ ಡಿಸೆಂಬರ್, 1995

ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು, 1957ನ್ನು ಮತ್ತಷ್ಟು ತಿದ್ದುಪಡಿ ಮಾಡಲು ಈ ಮುಂದಿನ ನಿಯಮಗಳ ಕರಡನ್ನು, ಅದರಿಂದ ಬಾಧಿತರಾಗುವ ಸಂಭವವಿರುವ ಎಲ್ಲಾ ವ್ಯಕ್ತಿಗಳಿಂದ, ಸರ್ಕಾರಿ ರಾಜ್ಯಪತ್ರದಲ್ಲಿ ಅದನ್ನು ಪ್ರಕಟಿಸಿದ ದಿನಾಂಕದಿಂದ 30 ದಿನಗಳೊಳಗಾಗಿ ಆಕ್ಷೇಪಣೆಗಳನ್ನು ಮತ್ತು ಸಲಹೆಗಳನ್ನು ಆಹ್ವಾನಿಸಿ, ಕರ್ನಾಟಕ ರಾಜ್ಯ ಸಿವಿಲ್ ಸೇವಾ ಅಧಿನಿಯಮ, 1978 (ಕರ್ನಾಟಕ ಅಧಿನಿಯಮ 1990ರ 14)ರ 3ನೇ ಪ್ರಕರಣದ (2)ನೇ ಉಪಪ್ರಕರಣದ ಮೂಲಕ ಅಗತ್ಯಪಡಿಸಲಾದಂತೆ, ದಿನಾಂಕ 12ನೇ ಅಕ್ಟೋಬರ್ 1995ರ ಕರ್ನಾಟಕ ವಿಶೇಷ ರಾಜ್ಯಪತ್ರದ ಭಾಗ–IV, ವಿಭಾಗ 2(ಸಿ) (i) ರಲ್ಲಿ ಅಧಿಸೂಚನೆ ಸಂಖ್ಯೆ ಡಿಪಿಎಆರ್ 8 ಎಸ್‌ಡಿಇ 93, ದಿನಾಂಕ 10ನೇ ಅಕ್ಟೋಬರ್ 1995 ರಲ್ಲಿ ಪ್ರಕಟಿಸಿರುವುದರಿಂದ;

ಮತ್ತು, ಸದರಿ ರಾಜ್ಯಪತ್ರವನ್ನು 1995ರ ಅಕ್ಟೋಬರ್ 12 ರಂದು ಸಾರ್ವಜನಿಕರಿಗೆ ಲಭ್ಯವಾಗುವಂತೆ ಮಾಡಿರುವುದರಿಂದ;

ಮತ್ತು, ಸದರಿ ಕರಡು ನಿಯಮಗಳ ಬಗ್ಗೆ ರಾಜ್ಯ ಸರ್ಕಾರಕ್ಕೆ ಯಾವುದೇ ಸಲಹೆಗಳೂ ಅಥವಾ ಆಕ್ಷೇಪಣೆಗಳೂ ಬಾರದಿರುವುದರಿಂದ;

ಈಗ ಕರ್ನಾಟಕ ರಾಜ್ಯ ಸಿವಿಲ್ ಸೇವಾ ಅಧಿನಿಯಮ, 1978 (ಕರ್ನಾಟಕ ಅಧಿನಿಯಮ 1990ರ 14)ರ 8ನೇ ಪ್ರಕರಣದೊಂದಿಗೆ ಓದಿಕೊಂಡ 3ನೇ ಪ್ರಕರಣದ (1)ನೇ ಉಪಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಈ ಮೂಲಕ ಈ ಮುಂದಿನ ನಿಯಮಗಳನ್ನು ರಚಿಸುತ್ತದೆ, ಎಂದರೆ:–

**1. ಹೆಸರು ಮತ್ತು ಪ್ರಾರಂಭ.–** (1) ಈ ನಿಯಮಗಳನ್ನು ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು)(ತಿದ್ದುಪಡಿ) ನಿಯಮಗಳು, 1995 ಎಂದು ಕರೆಯತಕ್ಕದ್ದು.

(2) ಅವು, ಸರ್ಕಾರಿ ರಾಜ್ಯಪತ್ರದಲ್ಲಿ ಅವುಗಳನ್ನು ಪ್ರಕಟಿಸಿದ ದಿನಾಂಕದಂದು ಜಾರಿಗೆ ಬರತಕ್ಕದ್ದು.

**2. 26ನೇ ನಿಯಮದ ತಿದ್ದುಪಡಿ.–** ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು, 1957ರ 26ನೇ ನಿಯಮದ ಬದಲಾಗಿ ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

"**26. ಪುನರವಲೋಕನ.–** ರಾಜ್ಯ ಸರ್ಕಾರವು, ಪ್ರಕರಣದ ದಾಖಲೆಗಳನ್ನು ತರಿಸಿಕೊಂಡ ತರುವಾಯ, ಯಾವ ಆದೇಶವನ್ನು ಪುನರವಲೋಕನ ಮಾಡಲಾಗುತ್ತದೆಯೋ ಆ ಆದೇಶವನ್ನು ಹೊರಡಿಸಿದ ಕಾಲದಲ್ಲಿ ಹಾಜರುಪಡಿಸಲಾಗದಿದ್ದ ಅಥವಾ ಲಭ್ಯವಿರದಿದ್ದ ಮತ್ತು ಪ್ರಕರಣದ ಸ್ವರೂಪವನ್ನು ಬದಲಾವಣೆ ಮಾಡುವ ಪರಿಣಾಮವುಳ್ಳ ಯಾವುದೇ ಹೊಸ ವಿಷಯ ಸಾಮಗ್ರಿಯು ಅಥವಾ ಸಾಕ್ಷ್ಯವು ತನ್ನ ಗಮನಕ್ಕೆ ಬಂದಾಗ ಅಥವಾ ಅದನ್ನು ತನ್ನ ಗಮನಕ್ಕೆ ತಂದಾಗ, ಈ ನಿಯಮಗಳ ಮೇರೆಗೆ ಹೊರಡಿಸಿದ ಯಾವುದೇ ಆದೇಶವನ್ನು ಯಾವುದೇ ಕಾಲದಲ್ಲಿ, ತಾನಾಗಿಯೇ ಅಥವಾ ಅನ್ಯಥಾ ಪುನರವಲೋಕನ ಮಾಡಬಹುದು; ಮತ್ತು

(ಎ) ಆ ಆದೇಶವನ್ನು ಸ್ಥಿರೀಕರಿಸಬಹುದು, ಮಾರ್ಪಾಟುಗೊಳಿಸಬಹುದು ಅಥವಾ ತಳ್ಳಿಹಾಕಬಹುದು;

(ಬಿ) ಯಾವುದೇ ದಂಡನೆಯನ್ನು ವಿಧಿಸಬಹುದು ಅಥವಾ ಆ ಆದೇಶದ ಮೂಲಕ ವಿಧಿಸಿದ ದಂಡನೆಯನ್ನು ತಳ್ಳಿಹಾಕಬಹುದು, ಕಡಿಮೆ ಮಾಡಬಹುದು, ಸ್ಥಿರೀಕರಿಸಬಹುದು ಅಥವಾ ಹೆಚ್ಚಿಸಬಹುದು;

(ಸಿ) ಪ್ರಕರಣದ ಸಂದರ್ಭ–ಸನ್ನಿವೇಶಗಳಲ್ಲಿ ತಾನು ಸೂಕ್ತವೆಂದು ಭಾವಿಸುವಂಥ ಮುಂದಿನ ಕ್ರಮ ಕೈಗೊಳ್ಳುವಂತೆ ಅಥವಾ ವಿಚಾರಣೆ ನಡೆಸುವಂತೆ ನಿರ್ದೇಶಿಸಿ ಆದೇಶವನ್ನು ಮಾಡಿರುವ ಪ್ರಾಧಿಕಾರಿಗೆ ಅಥವಾ ಇತರ ಯಾರೇ ಪ್ರಾಧಿಕಾರಿಗೆ ಆ ಪ್ರಕರಣವನ್ನು ಕಳುಹಿಸಿಕೊಡಬಹುದು; ಅಥವಾ

(ಡಿ) ತಾನು ಸೂಕ್ತವೆಂದು ಭಾವಿಸಬಹುದಾದಂಥ ಇತರ ಆದೇಶಗಳನ್ನು ಹೊರಡಿಸಬಹುದು:

ಪರಂತು, ಸಂಬಂಧಪಟ್ಟ ಸೇವೆಯ ಸದಸ್ಯನಿಗೆ ಉದ್ದೇಶಿತ ದಂಡನೆಯ ವಿರುದ್ಧ ಮನವಿಯನ್ನು ಸಲ್ಲಿಸಲು ಯುಕ್ತ ಅವಕಾಶವನ್ನು ನೀಡಿದ್ದ ಹೊರತು, ರಾಜ್ಯ ಸರ್ಕಾರವು ಯಾವುದೇ ದಂಡನೆಯನ್ನು ವಿಧಿಸುವ ಅಥವಾ ಹೆಚ್ಚಿಸುವ ಯಾವುದೇ ಆದೇಶವನ್ನು ಮಾಡತಕ್ಕದ್ದಲ್ಲ ಅಥವಾ 8ನೇ ನಿಯಮದ (v) ರಿಂದ (viii)ರ ವರೆಗಿನ ಖಂಡಗಳಲ್ಲಿ ನಿರ್ದಿಷ್ಟಪಡಿಸಿದ ದಂಡನೆಗಳಲ್ಲಿ ಯಾವುದೇ ಕಠಿಣ ದಂಡನೆಯನ್ನು ವಿಧಿಸಲು ಅಥವಾ ಯಾವ ಆದೇಶವನ್ನು ಪುನರವಲೋಕನ ಮಾಡಬೇಕೆಂದು ಕೋರಲಾಗಿದೆಯೋ ಆ ಆದೇಶದಲ್ಲಿ ವಿಧಿಸಿರುವ ಲಘು ದಂಡನೆಯನ್ನು ಯಾವುದೇ ಕಠಿಣ ದಂಡನೆಗೆ ಹೆಚ್ಚಿಸಲು ಉದ್ದೇಶಿಸಿದ್ದರೆ ಮತ್ತು 11ನೇ ನಿಯಮದ ಮೇರೆಗೆ ಈ ಪ್ರಕರಣದ ವಿಚಾರಣೆಯನ್ನು ಈಗಾಗಲೇ ನಡೆಸಿರದಿದ್ದರೆ, 14ನೇ ನಿಯಮದ ಉಪಬಂಧಗಳಿಗೊಳಪಟ್ಟು 11ನೇ ನಿಯಮದಲ್ಲಿ ಹೇಳಲಾದ ರೀತಿಯಲ್ಲಿ ವಿಚಾರಣೆಯನ್ನು ಮಾಡಿದ ತರುವಾಯ ಹೊರತು, ಮತ್ತು ಆಯೋಗದೊಂದಿಗೆ ಸಮಾಲೋಚನೆ ನಡೆಸಿದ ತರುವಾಯ ಹೊರತು, ಅಂಥ ದಂಡನೆಯನ್ನು ವಿಧಿಸತಕ್ಕದ್ದಲ್ಲ:

ಮತ್ತೂ ಪರಂತು, ಶಿಸ್ತು ವ್ಯವಹರಣೆಯಲ್ಲಿ, 8ನೇ ನಿಯಮದ (v) ರಿಂದ (viii)ರ ವರೆಗಿನ ಖಂಡಗಳಲ್ಲಿ ನಿರ್ದಿಷ್ಟಪಡಿಸಿದವುಗಳನ್ನು ಹೊರತುಪಡಿಸಿ ಯಾವುದೇ ದಂಡನೆಯನ್ನು ವಿಧಿಸಿರುವಂಥ ಯಾವ ಆದೇಶಕ್ಕೆ ಸಂಬಂಧಿಸಿದಂತೆ ಅಪೀಲನ್ನು ಸಲ್ಲಿಸಲು ಅವಕಾಶ ಕಲ್ಪಿಸಲಾಗಿದೆಯೋ ಆ ಆದೇಶವನ್ನು ಪುನರವಲೋಕನ ಮಾಡುವಂತೆ ಕೋರಿ ಸರ್ಕಾರಿ ನೌಕರನು ಯಾವುದೇ ಅರ್ಜಿ ಸಲ್ಲಿಸಲು ಅವಕಾಶವಿರತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಎಲ್ ಜಯರಾಮ್**

ಸರ್ಕಾರದ ಅಧೀನ ಕಾರ್ಯದರ್ಶಿ–II

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ, (ಸೇವಾ ನಿಯಮಗಳು).

**ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ**

**ಅಧಿಸೂಚನೆ**

ಅಧಿಸೂಚನೆ ಸಂಖ್ಯೆ ಡಿಪಿಎಆರ್ 15 ಎಸ್‌ಡಿಇ 95, ಬೆಂಗಳೂರು, ದಿನಾಂಕ 22ನೇ ಮಾರ್ಚ್, 1995.

ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು, 1957ನ್ನು ಮತ್ತಷ್ಟು ತಿದ್ದುಪಡಿ ಮಾಡಲು ಈ ಮುಂದಿನ ನಿಯಮಗಳ ಕರಡನ್ನು, ಅದರಿಂದ ಬಾಧಿತರಾಗುವ ಸಂಭವವಿರುವ ಎಲ್ಲಾ ವ್ಯಕ್ತಿಗಳಿಂದ, ಸರ್ಕಾರಿ ರಾಜ್ಯಪತ್ರದಲ್ಲಿ ಅದನ್ನು ಪ್ರಕಟಿಸಿದ ದಿನಾಂಕದಿಂದ 30 ದಿನಗಳೊಳಗಾಗಿ ಆಕ್ಷೇಪಣೆಗಳನ್ನು ಮತ್ತು ಸಲಹೆಗಳನ್ನು ಆಹ್ವಾನಿಸಿ, ಕರ್ನಾಟಕ ರಾಜ್ಯ ಸಿವಿಲ್ ಸೇವಾ ಅಧಿನಿಯಮ, 1978 (ಕರ್ನಾಟಕ ಅಧಿನಿಯಮ 1990ರ 14)ರ 3ನೇ ಪ್ರಕರಣದ (2)ನೇ ಉಪಪ್ರಕರಣದ ಮೂಲಕ ಅಗತ್ಯಪಡಿಸಲಾದಂತೆ, ದಿನಾಂಕ 7ನೇ ಫೆಬ್ರವರಿ 1996ರ ಕರ್ನಾಟಕ <u>ವಿಶೇಷ</u> ರಾಜ್ಯಪತ್ರದ ಭಾಗ–IV, ವಿಭಾಗ 2(ಸಿ) (i) ರಲ್ಲಿ ಅಧಿಸೂಚನೆ ಸಂಖ್ಯೆ ಡಿಪಿಎಆರ್ 15 ಎಸ್‌ಡಿಇ 95, ದಿನಾಂಕ 7ನೇ ಫೆಬ್ರವರಿ 1996 ರಲ್ಲಿ ಪ್ರಕಟಿಸಿರುವುದರಿಂದ;

ಮತ್ತು, ಸದರಿ ರಾಜ್ಯಪತ್ರವನ್ನು 1996ರ ಫೆಬ್ರವರಿ 9 ರಂದು ಸಾರ್ವಜನಿಕರಿಗೆ ಲಭ್ಯವಾಗುವಂತೆ ಮಾಡಿರುವುದರಿಂದ;

ಮತ್ತು, ಸದರಿ ಕರಡು ನಿಯಮಗಳ ಬಗ್ಗೆ ರಾಜ್ಯ ಸರ್ಕಾರಕ್ಕೆ ಯಾವುದೇ ಸಲಹೆಗಳೂ ಅಥವಾ ಆಕ್ಷೇಪಣೆಗಳೂ ಬಾರದಿರುವುದರಿಂದ;

ಈಗ ಕರ್ನಾಟಕ ರಾಜ್ಯ ಸಿವಿಲ್ ಸೇವಾ ಅಧಿನಿಯಮ, 1978 (ಕರ್ನಾಟಕ ಅಧಿನಿಯಮ 1990ರ 14)ರ 8ನೇ ಪ್ರಕರಣದೊಂದಿಗೆ ಓದಿಕೊಂಡ 3ನೇ ಪ್ರಕರಣದ (1)ನೇ ಉಪಪ್ರಕರಣದಿಂದ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಈ ಮೂಲಕ ಈ ಮುಂದಿನ ನಿಯಮಗಳನ್ನು ರಚಿಸುತ್ತದೆ, ಎಂದರೆ:–

**1. ಹೆಸರು ಮತ್ತು ಪ್ರಾರಂಭ.–** (1) ಈ ನಿಯಮಗಳನ್ನು ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು)(ತಿದ್ದುಪಡಿ) ನಿಯಮಗಳು, 1996 ಎಂದು ಕರೆಯತಕ್ಕದ್ದು.

(2) ಅವು, ಸರ್ಕಾರಿ ರಾಜ್ಯಪತ್ರದಲ್ಲಿ ಅವುಗಳನ್ನು ಪ್ರಕಟಿಸಿದ ದಿನಾಂಕದಂದು ಜಾರಿಗೆ ಬರತಕ್ಕದ್ದು.

**2. 14ನೇ ನಿಯಮದ ತಿದ್ದುಪಡಿ.–** ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು, 1957ರ 14ನೇ ನಿಯಮದ ಎರಡನೇ ಪರಂತುಕವನ್ನು ಬಿಟ್ಟುಬಿಡತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಎಲ್ ಜಯರಾಮ್**

ಸರ್ಕಾರದ ಅಧೀನ ಕಾರ್ಯದರ್ಶಿ–II

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ,

(ಸೇವಾ ನಿಯಮಗಳು).

**ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ**

**ಅಧಿಸೂಚನೆ**

ಸಂಖ್ಯೆ ಡಿಪಿಎಆರ್ 9 ಎಸ್‌ಡಿಇ 92, ಬೆಂಗಳೂರು, ದಿನಾಂಕ 21ನೇ ಜನವರಿ, 1997

ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು, 1957ನ್ನು ಮತ್ತಷ್ಟು ತಿದ್ದುಪಡಿ ಮಾಡಲು ಈ ಮುಂದಿನ ನಿಯಮಗಳ ಕರಡನ್ನು, ಅದರಿಂದ ಬಾಧಿತರಾಗುವ ಸಂಭವವಿರುವ ಎಲ್ಲಾ ವ್ಯಕ್ತಿಗಳಿಂದ, ಸರ್ಕಾರಿ ರಾಜ್ಯಪತ್ರದಲ್ಲಿ ಅದನ್ನು ಪ್ರಕಟಿಸಿದ ದಿನಾಂಕದಿಂದ 30 ದಿನಗಳೊಳಗಾಗಿ ಆಕ್ಷೇಪಣೆಗಳನ್ನು ಮತ್ತು ಸಲಹೆಗಳನ್ನು ಆಹ್ವಾನಿಸಿ, ಕರ್ನಾಟಕ ರಾಜ್ಯ ಸಿವಿಲ್ ಸೇವಾ ಅಧಿನಿಯಮ, 1978 (ಕರ್ನಾಟಕ ಅಧಿನಿಯಮ 1990ರ 14)ರ 8ನೇ ಪ್ರಕರಣದೊಂದಿಗೆ ಓದಿಕೊಂಡ 3ನೇ ಪ್ರಕರಣದ (2)ನೇ ಉಪಪ್ರಕರಣದ (ಎ) ಖಂಡದ ಮೂಲಕ ಅಗತ್ಯಪಡಿಸಲಾದಂತೆ, ದಿನಾಂಕ 28ನೇ ಜೂನ್ 1996ರ ಕರ್ನಾಟಕ <u>ವಿಶೇಷ</u> ರಾಜ್ಯಪತ್ರದ ಭಾಗ–IV, ವಿಭಾಗ 2 (ಸಿ) (i) ರಲ್ಲಿ ಅಧಿಸೂಚನೆ ಸಂಖ್ಯೆ ಡಿಪಿಎಆರ್ 9 ಎಸ್‌ಡಿಇ 92, ದಿನಾಂಕ 25ನೇ ಜೂನ್ 1996 ರಲ್ಲಿ ಪ್ರಕಟಿಸಿರುವುದರಿಂದ;

ಸದರಿ ರಾಜ್ಯಪತ್ರವನ್ನು 1996ರ ಜೂನ್ 28 ರಂದು ಸಾರ್ವಜನಿಕರಿಗೆ ಲಭ್ಯವಾಗುವಂತೆ ಮಾಡಿರುವುದರಿಂದ;

ಮತ್ತು, ಸ್ವೀಕರಿಸಿದ ಸಲಹೆಗಳನ್ನು ರಾಜ್ಯ ಸರ್ಕಾರವು ಪರಿಗಣಿಸಿರುವುದರಿಂದ;

ಈಗ, ಕರ್ನಾಟಕ ರಾಜ್ಯ ಸಿವಿಲ್ ಸೇವಾ ಅಧಿನಿಯಮ, 1978 (ಕರ್ನಾಟಕ ಅಧಿನಿಯಮ 1990ರ 14)ರ 8ನೇ ಪ್ರಕರಣದೊಂದಿಗೆ ಓದಿಕೊಂಡ 3ನೇ ಪ್ರಕರಣದ (1)ನೇ ಉಪಪ್ರಕರಣದಿಂದ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಈ ಮೂಲಕ ಈ ಮುಂದಿನ ನಿಯಮಗಳನ್ನು ರಚಿಸುತ್ತದೆ, ಎಂದರೆ:–

**1. ಹೆಸರು ಮತ್ತು ಪ್ರಾರಂಭ.–** (1) ಈ ನಿಯಮಗಳನ್ನು ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) (ತಿದ್ದುಪಡಿ) ನಿಯಮಗಳು, 1997 ಎಂದು ಕರೆಯತಕ್ಕದ್ದು.

(2) ಅವು, ಸರ್ಕಾರಿ ರಾಜ್ಯಪತ್ರದಲ್ಲಿ ಅವುಗಳನ್ನು ಪ್ರಕಟಿಸಿದ ದಿನಾಂಕದಂದು ಜಾರಿಗೆ ಬರತಕ್ಕದ್ದು.

**2. 14ಎ ನಿಯಮದ ತಿದ್ದುಪಡಿ.–** ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು, 1957ರ 14ಎ ನಿಯಮದಲ್ಲಿ (ಇಲ್ಲಿ ಇನ್ನು ಮುಂದೆ ಸದರಿ ನಿಯಮಗಳೆಂದು ಉಲ್ಲೇಖಿಸಲಾಗಿದೆ),–

(i) (1)ನೇ ಉಪನಿಯಮದಲ್ಲಿ, ಈ ಮುಂದಿನದನ್ನು 1986ರ ಜನವರಿ 15 ರಿಂದ ಜಾರಿಗೆ ಬರುವಂತೆ ಕೊನೆಯಲ್ಲಿ ಸೇರಿಸಲಾಗಿದೆಯೆಂದು ಭಾವಿಸತಕ್ಕದ್ದು, ಎಂದರೆ: "ಅಥವಾ ಅವರ ಮೇಲೆ ಆರೋಪಿಸಿದ, ಭ್ರಷ್ಟಾಚಾರ ಪ್ರತಿಬಂಧ ಅಧಿನಿಯಮ, 1947ರ ಅಥವಾ ಭ್ರಷ್ಟಾಚಾರ ಪ್ರತಿಬಂಧ ಅಧಿನಿಯಮ, 1988ರ ಮೇರೆಗೆ ದಂಡನೀಯವಾದ ಅಪರಾಧಗಳನ್ನು, ಕರ್ನಾಟಕ ಲೋಕಾಯುಕ್ತ ಪೊಲೀಸರು 1992ರ ಡಿಸೆಂಬರ್ 21ನೇ ದಿನಕ್ಕೆ ಮುಂಚೆ ತನಿಖೆ ಮಾಡಿದ್ದರೆ."

(ii) (2)ನೇ ಉಪನಿಯಮದಲ್ಲಿ, (ಎ) ಖಂಡದಲ್ಲಿ, "ಲೋಕಾಯುಕ್ತರು ಅಥವಾ ಉಪಲೋಕಾಯುಕ್ತರು ಅಭಿಪ್ರಾಯಪಟ್ಟರೆ" ಎಂಬ ಪದಗಳ ಬದಲಾಗಿ, ಈ ಮುಂದಿನದನ್ನು 1986ರ ಜನವರಿ 15 ರಿಂದ ಜಾರಿಗೆ ಬರುವಂತೆ ಸೇರಿಸತಕ್ಕದ್ದು ಮತ್ತು ಸೇರಿಸಲಾಗಿದೆಯೆಂದು ಭಾವಿಸತಕ್ಕದ್ದು, ಎಂದರೆ:–

"ಲೋಕಾಯುಕ್ತರು ಅಥವಾ ಉಪಲೋಕಾಯುಕ್ತರು ಅಥವಾ (1992ರ ಡಿಸೆಂಬರ್ ಇಪ್ಪತ್ತೊಂದನೇ ದಿನಕ್ಕೆ ಮುಂಚೆ), ಕರ್ನಾಟಕ ಲೋಕಾಯುಕ್ತ ಪೊಲೀಸರ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್ ಇವರು ಅಭಿಪ್ರಾಯಪಟ್ಟರೆ".

(iii) ವಿವರಣೆಯಲ್ಲಿ, ಈ ಮುಂದಿನದನ್ನು 1986ರ ಜನವರಿ 15 ರಿಂದ ಜಾರಿಗೆ ಬರುವಂತೆ ಕೊನೆಯಲ್ಲಿ ಸೇರಿಸತಕ್ಕದ್ದು ಮತ್ತು ಸೇರಿಸಲಾಗಿದೆಯೆಂದು ಭಾವಿಸತಕ್ಕದ್ದು, ಎಂದರೆ:–

"ಮತ್ತು, 'ಕರ್ನಾಟಕ ಲೋಕಾಯುಕ್ತ ಪೊಲೀಸ್' ಎಂದರೆ ಕರ್ನಾಟಕ ಲೋಕಾಯುಕ್ತ ಅಧಿನಿಯಮ, 1984ರ 15ನೇ ಪ್ರಕರಣದ ಮೇರೆಗೆ ಸ್ಥಾಪಿಸಿದ ಪೊಲೀಸ್ ವಿಭಾಗ ಮತ್ತು ಅದು ಸಾಧ್ಯವಾಗಬಹುದಾದಷ್ಟು ಮಟ್ಟಿಗೆ, ಕರ್ನಾಟಕ ರಾಜ್ಯ ಜಾಗೃತ ಆಯೋಗ ನಿಯಮಗಳು, 1980 ರಲ್ಲಿ ಹೇಳಿರುವ ಸಂವಾದಿ ವಿಭಾಗವನ್ನೂ ಒಳಗೊಳ್ಳುತ್ತದೆ ಮತ್ತು "ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್" ಎಂಬ ಪದಾವಳಿಯನ್ನು ತದನುಸಾರವಾಗಿ ಅರ್ಥೈಸತಕ್ಕದ್ದು."

**3. ಸಿಂಧುಗೊಳಿಸುವಿಕೆ.–** (ಎ) ಸದರಿ ನಿಯಮಗಳಲ್ಲಿ ಏನೇ ಒಳಗೊಂಡಿದ್ದರೂ, 1992ರ ಡಿಸೆಂಬರ್ ಇಪ್ಪತ್ತೊಂದನೇ ದಿನಕ್ಕಿಂತ ಮುಂಚೆ ಭ್ರಷ್ಟಾಚಾರ ಪ್ರತಿಬಂಧ ಅಧಿನಿಯಮ, 1947ರ ಅಥವಾ ಭ್ರಷ್ಟಾಚಾರ ಪ್ರತಿಬಂಧ ಅಧಿನಿಯಮ, 1988ರ ಮೇರೆಗೆ ದಂಡನೀಯವಾದ ಅಪರಾಧಕ್ಕೆ ಸಂಬಂಧಿಸಿದಂತೆ ಕರ್ನಾಟಕ ಲೋಕಾಯುಕ್ತ ಪೊಲೀಸರು ನಡೆಸಿದ ತನಿಖೆಯಲ್ಲಿ ಪತ್ತೆ ಮಾಡಿದ ದುರ್ನಡತೆಗೆ ಸಂಬಂಧಪಟ್ಟಂತೆ ಸದರಿ ನಿಯಮಗಳ 14ಎ ನಿಯಮದ (2)ನೇ ಉಪನಿಯಮದ (ಎ) ಖಂಡದಲ್ಲಿ ಉಲ್ಲೇಖಿಸಿರುವ ವ್ಯಕ್ತಿಯ ವಿರುದ್ಧ ಶಿಸ್ತು ವಿಚಾರಣೆಯನ್ನು ಪ್ರಾರಂಭಿಸುವುದಕ್ಕಾಗಿ ಕರ್ನಾಟಕ ಲೋಕಾಯುಕ್ತ ತನಿಖಾ ವಿಭಾಗದ ಪೊಲೀಸ್ ಇನ್ಸ್‌ಪೆಕ್ಟರ್ ಜನರಲ್ಲರು ಮಾಡಿದ ಪ್ರತಿಯೊಂದು ಶಿಫಾರಸನ್ನು ಮತ್ತು ಸದರಿ ನಿಯಮಗಳ 14ಎ ನಿಯಮದ ಮೇರೆಗೆ ವಿಚಾರಣೆಗೆ ಸಂಬಂಧಿಸಿದ ಅಂಥ ಶಿಫಾರಸಿನ ಬಗ್ಗೆ ಸರ್ಕಾರವು ನೀಡಿದ ನಿರ್ದೇಶನವನ್ನು ಈ ನಿಯಮಗಳ ಮೂಲಕ ತಿದ್ದುಪಡಿಯಾದ ಸದರಿ ನಿಯಮಗಳ 14ಎ ನಿಯಮದ ಉಪಬಂಧಗಳು ಎಲ್ಲಾ ಸಂಬಂಧಿತ ಕಾಲಗಳಲ್ಲಿ ಜಾರಿಯಲ್ಲಿದ್ದಿದ್ದರೆ ಹೇಗೋ ಹಾಗೆ ಸಿಂಧುವಾದವುಗಳೆಂದು ಮತ್ತು ಯಾವಾಗಲೂ ಸಿಂಧುವಾದವುಗಳು ಆಗಿದ್ದವೆಂದು ಭಾವಿಸತಕ್ಕದ್ದು.

(ಬಿ) ಈ ನಿಯಮಗಳ ಮೂಲಕ ತಿದ್ದುಪಡಿಯಾದ ಸದರಿ ನಿಯಮಗಳ (1)ನೇ ಮತ್ತು (2)ನೇ ಉಪನಿಯಮಗಳು ಅನ್ವಯವಾಗುವ ಪ್ರಕರಣಗಳಲ್ಲಿ ಸದರಿ ನಿಯಮಗಳ 14ಎ ನಿಯಮದ ಮೇರೆಗೆ ನಡೆಸಿದ ಯಾವುದೇ ವ್ಯವಹರಣೆಯನ್ನು ಅಥವಾ ವಿಚಾರಣೆಯನ್ನು, ಆ ಬಗ್ಗೆ ಮಾಡಿದ ಯಾವುದೇ ಶಿಫಾರಸನ್ನು, ಸರ್ಕಾರವು ಹೊರಡಿಸಿದ ಯಾವುದೇ ಆದೇಶವನ್ನು ಮತ್ತು ಚಲಾಯಿಸಿದ ಯಾವುದೇ ಅಧಿಕಾರ ವ್ಯಾಪ್ತಿಯನ್ನು ಎಂದಿಗೂ ಅಸಿಂಧುವಾಗಿರುವುದಾಗಿ ಅಥವಾ ಕಾನೂನು ಬಾಹಿರವಾಗಿರುವುದಾಗಿ ಭಾವಿಸತಕ್ಕದ್ದಲ್ಲ ಮತ್ತು ಅಂಥ ವ್ಯವಹರಣೆಯನ್ನು ಅಥವಾ ವಿಚಾರಣೆಯನ್ನು ಲೋಕಾಯುಕ್ತ ಪೊಲೀಸ್ ಇನ್ಸ್‌ಪೆಕ್ಟರ್ ಜನರಲ್‌ರವರ ಶಿಫಾರಸ್ಸಿನ ಮೇಲೆ ಪ್ರಾರಂಭಿಸಲಾಗಿತ್ತೆಂಬ ಕಾರಣದ ಮೇಲೆ ಯಾವುದೇ ನ್ಯಾಯಾಲಯದ, ಪ್ರಾಧಿಕಾರಿಯ ಅಥವಾ ನ್ಯಾಯಾಧಿಕರಣದ ಮುಂದೆ ಪ್ರಶ್ನಿಸತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಎಲ್. ಜಯರಾಮ್**
ಸರ್ಕಾರದ ಅಧೀನ ಕಾರ್ಯದರ್ಶಿ–II
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ,
(ಸೇವಾ ನಿಯಮಗಳು).

**ಅಧಿಸೂಚನೆ**

ಸಂಖ್ಯೆ ಡಿಪಿಎಆರ್ 15 ಎಸ್‌ಡಿಇ 96, ಬೆಂಗಳೂರು, ದಿನಾಂಕ 20ನೇ ಜೂನ್ 1997.

ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು, 1957ರ 10ನೇ ನಿಯಮದ (1)ನೇ ಉಪನಿಯಮದಿಂದ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ ಮತ್ತು ಅಧಿಸೂಚನೆ ಸಂಖ್ಯೆ ಡಿಪಿಎಆರ್ 38 ಎಸ್‌ಎಸ್‌ಆರ್ 74(1), ದಿನಾಂಕ 19ನೇ ಅಕ್ಟೋಬರ್, 1974ರಲ್ಲಿ ಸರ್ಕಾರದ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿದ ಅಧಿಕಾರಗಳಿಗೆ ಬಾಧಕವಾಗದಂತೆ, ಕರ್ನಾಟಕ ಸರ್ಕಾರವು, ಸರ್ಕಾರದ

ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ, ಇವರಿಗೆ ಕರ್ನಾಟಕ ಸರ್ಕಾರ ಸಚಿವಾಲಯ ಸೇವೆಗೆ ಸೇರಿದ ಎಲ್ಲ ಸಮೂಹ 'ಸಿ' ಮತ್ತು ಸಮೂಹ 'ಡಿ' ನೌಕರರನ್ನು ಅಮಾನತ್ತಿನಲ್ಲಿಡಲು ಈ ಮೂಲಕ ಅಧಿಕಾರ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಎಲ್ ಜಯರಾಮ್**

ಸರ್ಕಾರದ ಅಧೀನ ಕಾರ್ಯದರ್ಶಿ–II

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ, (ಸೇವಾ ನಿಯಮಗಳು).

**ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ**

**ಅಧಿಸೂಚನೆ**

ಸಂಖ್ಯೆ ಡಿಪಿಎಆರ್ 2 ಎಸ್‌ಡಿಇ 99, ಬೆಂಗಳೂರು, ದಿನಾಂಕ 17ನೇ ಜೂನ್ 1999

ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು, 1957ನ್ನು ಮತ್ತಷ್ಟು ತಿದ್ದುಪಡಿ ಮಾಡಲು ಈ ಮುಂದಿನ ನಿಯಮಗಳ ಕರಡನ್ನು, ಅದರಿಂದ ಬಾಧಿತರಾಗುವ ಸಂಭವವಿರುವ ಎಲ್ಲಾ ವ್ಯಕ್ತಿಗಳಿಂದ, ಸರ್ಕಾರಿ ರಾಜ್ಯಪತ್ರದಲ್ಲಿ ಅದನ್ನು ಪ್ರಕಟಿಸಿದ ದಿನಾಂಕದಿಂದ 30 ದಿನಗಳೊಳಗಾಗಿ ಆಕ್ಷೇಪಣೆಗಳನ್ನು ಮತ್ತು ಸಲಹೆಗಳನ್ನು ಆಹ್ವಾನಿಸಿ, ಕರ್ನಾಟಕ ರಾಜ್ಯ ಸಿವಿಲ್ ಸೇವಾ ಅಧಿನಿಯಮ, 1978 (ಕರ್ನಾಟಕ ಅಧಿನಿಯಮ 1990ರ 14)ರ 3ನೇ ಪ್ರಕರಣದ (2)ನೇ ಉಪಪ್ರಕರಣದ ಮೂಲಕ ಅಗತ್ಯಪಡಿಸಲಾದಂತೆ, ದಿನಾಂಕ 22ನೇ ಏಪ್ರಿಲ್ 1992ರ ಕರ್ನಾಟಕ ವಿಶೇಷ ರಾಜ್ಯಪತ್ರದ ಭಾಗ–IV, ವಿಭಾಗ 2(ಸಿ) (i) ರಲ್ಲಿ ಅಧಿಸೂಚನೆ ಸಂಖ್ಯೆ ಡಿಪಿಎಆರ್ 2 ಎಸ್‌ಡಿಇ 99, ದಿನಾಂಕ 20ನೇ ಮಾರ್ಚ್ 1999 ರಲ್ಲಿ ಪ್ರಕಟಿಸಿರುವುದರಿಂದ;

ಮತ್ತು ಸದರಿ ರಾಜ್ಯಪತ್ರವನ್ನು 1999ರ ಏಪ್ರಿಲ್ 22 ರಂದು ಸಾರ್ವಜನಿಕರಿಗೆ ಲಭ್ಯವಾಗುವಂತೆ ಮಾಡಿರುವುದರಿಂದ;

ಮತ್ತು, ಸದರಿ ಕರಡಿನ ಬಗ್ಗೆ ರಾಜ್ಯ ಸರ್ಕಾರಕ್ಕೆ ಯಾವ ಆಕ್ಷೇಪಣೆಗಳೂ ಅಥವಾ ಸಲಹೆಗಳೂ ಬಾರದಿರುವುದರಿಂದ;

ಈಗ ಕರ್ನಾಟಕ ರಾಜ್ಯ ಸಿವಿಲ್ ಸೇವಾ ಅಧಿನಿಯಮ, 1978 (ಕರ್ನಾಟಕ ಅಧಿನಿಯಮ 1990ರ 14)ರ 8ನೇ ಪ್ರಕರಣದೊಂದಿಗೆ ಓದಿಕೊಂಡ 3ನೇ ಪ್ರಕರಣದ (1)ನೇ ಉಪಪ್ರಕರಣದಿಂದ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು, ಈ ಮೂಲಕ ಈ ಮುಂದಿನ ನಿಯಮಗಳನ್ನು ರಚಿಸುತ್ತದೆ, ಎಂದರೆ:–

**1. ಹೆಸರು ಮತ್ತು ಪ್ರಾರಂಭ.**– (1) ಈ ನಿಯಮಗಳನ್ನು ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) (ಮೊದಲನೇ ತಿದ್ದುಪಡಿ) ನಿಯಮಗಳು, 1999 ಎಂದು ಕರೆಯತಕ್ಕದ್ದು.

(2) ಅವು, ಸರ್ಕಾರಿ ರಾಜ್ಯಪತ್ರದಲ್ಲಿ ಅವುಗಳನ್ನು ಪ್ರಕಟಿಸಿದ ದಿನಾಂಕದಂದು ಜಾರಿಗೆ ಬರತಕ್ಕದ್ದು.

**2. 5ನೇ ನಿಯಮದ ತಿದ್ದುಪಡಿ.**– ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು, 1957ರ 5ನೇ ನಿಯಮದಲ್ಲಿ (3)ನೇ ಉಪನಿಯಮದ ಬದಲಾಗಿ, 1998ರ ಏಪ್ರಿಲ್ ಮೊದಲನೇ ದಿನದಿಂದ ಜಾರಿಗೆ ಬರುವಂತೆ ಈ ಮುಂದಿನದನ್ನು ಸೇರಿಸತಕ್ಕದ್ದು ಮತ್ತು ಸೇರಿಸಿರುವುದಾಗಿ ಭಾವಿಸತಕ್ಕದ್ದು, ಎಂದರೆ:–

"(3) (ಎ) ರಾಜ್ಯ ಸಿವಿಲ್ ಸೇವೆಗಳ ಸಮೂಹ 'ಎ' ಯು ರೂ. 7400–200–8800–260–10880–320–13120ರ ಮತ್ತು ಅದಕ್ಕೂ ಮೇಲ್ಪಟ್ಟ ವೇತನ ಶ್ರೇಣಿಗಳನ್ನು ಹೊಂದಿರುವ ಹುದ್ದೆಗಳನ್ನು ಒಳಗೊಂಡಿರತಕ್ಕದ್ದು.

(ಬಿ) ರಾಜ್ಯ ಸಿವಿಲ್ ಸೇವೆಗಳ ಸಮೂಹ 'ಬಿ' ಯು ರೂ. 5575–125–5700–150–7200–200–8800–260–10620ರ ಮತ್ತು ಅದಕ್ಕೂ ಮೇಲ್ಪಟ್ಟ ವೇತನ ಶ್ರೇಣಿಗಳನ್ನು, ಆದರೆ ರೂ. 7400–200–8800–260–10880–320–13120 ಕ್ಕಿಂತ ಕೆಳಗಿನ ವೇತನ ಶ್ರೇಣಿಯನ್ನು ಹೊಂದಿರುವ ಹುದ್ದೆಗಳನ್ನು ಒಳಗೊಂಡಿರತಕ್ಕದ್ದು.

(ಸಿ) ರಾಜ್ಯ ಸಿವಿಲ್ ಸೇವೆಗಳ ಸಮೂಹ "ಸಿ" ಯು ರೂ.2500–50–2700–75–3450–100–3850ರ ವೇತನ ಶ್ರೇಣಿಗಿಂತ ಮೇಲ್ಪಟ್ಟ ವೇತನ ಶ್ರೇಣಿಗಳನ್ನು, ಆದರೆ ರೂ. 5575–125–5700–150–7200–200–8800–260–10620ಕ್ಕಿಂತ ಕೆಳಗಿನ ವೇತನ ಶ್ರೇಣಿಯನ್ನು ಹೊಂದಿರುವ, ಆದರೆ ಅನುಸೂಚಿ–IV ರಲ್ಲಿ ನಿರ್ದಿಷ್ಟಪಡಿಸಿರುವ ಹುದ್ದೆಗಳನ್ನು ಹೊರತುಪಡಿಸಿದ ಹುದ್ದೆಗಳನ್ನು ಒಳಗೊಂಡಿರತಕ್ಕದ್ದು; ಮತ್ತು

(ಡಿ) ರಾಜ್ಯ ಸಿವಿಲ್ ಸೇವೆಗಳ ಸಮೂಹ "ಡಿ" ಯು ಅನುಸೂಚಿ– IV ರಲ್ಲಿ ನಿರ್ದಿಷ್ಟಪಡಿಸಿರುವ ಹುದ್ದೆಗಳನ್ನು ಮತ್ತು ರೂ. 2500–50–2700–75–3450–100–3850ರ ವೇತನ ಶ್ರೇಣಿಯನ್ನು ಹೊಂದಿರುವ ಹುದ್ದೆಗಳನ್ನು ಒಳಗೊಂಡಿರತಕ್ಕದ್ದು."

**ವಿವರಣೆ.**– ಈ ಉಪನಿಯಮದ ಉದ್ದೇಶಗಳಿಗಾಗಿ "ವೇತನ ಶ್ರೇಣಿ" ಎಂದರೆ ಕರ್ನಾಟಕ ಸಿವಿಲ್ ಸೇವಾ (ಪರಿಷ್ಕೃತ ವೇತನ) ನಿಯಮಗಳು, 1999 ರಲ್ಲಿ ಮತ್ತು ಸಂಬಂಧಿಸಿದ ಆದೇಶಗಳಲ್ಲಿ ಹೇಳಿರುವ ವಿವಿಧ ಹುದ್ದೆಗಳಿಗೆ ಸಂಬಂಧಿಸಿದಂತೆ ನಿಗದಿಪಡಿಸಿದ ಪರಿಷ್ಕೃತ ವೇತನ ಶ್ರೇಣಿ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಎಲ್ ಜಯರಾಮ್**

ಸರ್ಕಾರದ ಅಧೀನ ಕಾರ್ಯದರ್ಶಿ–II

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ, (ಸೇವಾ ನಿಯಮಗಳು).

**ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ**

**ಅಧಿಸೂಚನೆ**

ಸಂಖ್ಯೆ ಡಿಪಿಎಆರ್ 13 ಎಸ್‌ಡಿಇ 97, ಬೆಂಗಳೂರು, ದಿನಾಂಕ 1ನೇ ಸೆಪ್ಟೆಂಬರ್, 1998.

ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು, 1957ನ್ನು ಮತ್ತಷ್ಟು ತಿದ್ದುಪಡಿ ಮಾಡಲು ಈ ಮುಂದಿನ ನಿಯಮಗಳ ಕರಡನ್ನು, ಅದರಿಂದ ಬಾಧಿತರಾಗುವ ಸಂಭವವಿರುವ ಎಲ್ಲಾ ವ್ಯಕ್ತಿಗಳಿಂದ, ಸರ್ಕಾರಿ ರಾಜ್ಯಪತ್ರದಲ್ಲಿ ಅದನ್ನು ಪ್ರಕಟಿಸಿದ ದಿನಾಂಕದಿಂದ 30 ದಿನಗಳೊಳಗಾಗಿ ಆಕ್ಷೇಪಣೆಗಳನ್ನು ಮತ್ತು ಸಲಹೆಗಳನ್ನು ಆಹ್ವಾನಿಸಿ, ಕರ್ನಾಟಕ ರಾಜ್ಯ ಸಿವಿಲ್ ಸೇವಾ ಅಧಿನಿಯಮ, 1978 (ಕರ್ನಾಟಕ ಅಧಿನಿಯಮ 1990ರ 14)ರ 3ನೇ ಪ್ರಕರಣದ (2)ನೇ ಉಪಪ್ರಕರಣದ (ಎ) ಖಂಡದ ಮೂಲಕ ಅಗತ್ಯಪಡಿಸಲಾದಂತೆ, ದಿನಾಂಕ 28ನೇ ಮಾರ್ಚ್ 1998ರ ಕರ್ನಾಟಕ ವಿಶೇಷ ರಾಜ್ಯಪತ್ರದ ಭಾಗ–IV, ವಿಭಾಗ 2(ಸಿ) (i) ರಲ್ಲಿ ಅಧಿಸೂಚನೆ ಸಂಖ್ಯೆ ಡಿಪಿಎಆರ್ 13 ಎಸ್‌ಡಿಇ 97, ದಿನಾಂಕ 24ನೇ ಮಾರ್ಚ್ 1998 ರಲ್ಲಿ ಪ್ರಕಟಿಸಿರುವುದರಿಂದ;

ಸದರಿ ರಾಜ್ಯಪತ್ರವನ್ನು 1998ರ ಮಾರ್ಚ್ 28 ರಂದು ಸಾರ್ವಜನಿಕರಿಗೆ ಲಭ್ಯವಾಗುವಂತೆ ಮಾಡಿರುವುದರಿಂದ;

ಮತ್ತು, ಈ ಸಂಬಂಧದಲ್ಲಿ ಸ್ವೀಕರಿಸಿದ ಆಕ್ಷೇಪಣೆಗಳನ್ನು ಮತ್ತು ಸಲಹೆಗಳನ್ನು ರಾಜ್ಯ ಸರ್ಕಾರವು ಪರಿಗಣಿಸಿರುವುದರಿಂದ;

ಈಗ ಕರ್ನಾಟಕ ರಾಜ್ಯ ಸಿವಿಲ್ ಸೇವಾ ಅಧಿನಿಯಮ, 1978 (ಕರ್ನಾಟಕ ಅಧಿನಿಯಮ 1990ರ 14)ರ 8ನೇ ಪ್ರಕರಣದೊಂದಿಗೆ ಓದಿಕೊಂಡ 3ನೇ ಪ್ರಕರಣದ (1)ನೇ ಉಪಪ್ರಕರಣದಿಂದ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಈ ಮೂಲಕ ಈ ಮುಂದಿನ ನಿಯಮಗಳನ್ನು ರಚಿಸುತ್ತದೆ, ಎಂದರೆ:–

**1. ಹೆಸರು ಮತ್ತು ಪ್ರಾರಂಭ.–** (1) ಈ ನಿಯಮಗಳನ್ನು ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) (ತಿದ್ದುಪಡಿ) ನಿಯಮಗಳು, 1998 ಎಂದು ಕರೆಯತಕ್ಕದ್ದು.

(2) 2, 3 ಮತ್ತು 5ನೇ ನಿಯಮಗಳು ಕೂಡಲೇ ಜಾರಿಗೆ ಬರತಕ್ಕದ್ದು ಮತ್ತು 4ನೇ ನಿಯಮವು 1995ರ ಡಿಸೆಂಬರ್ ಇಪ್ಪತ್ತಾರನೇ ದಿನದಿಂದ ಜಾರಿಗೆ ಬಂದಿದೆಯೆಂದು ಭಾವಿಸತಕ್ಕದ್ದು.

**2. 9ನೇ ನಿಯಮದ ತಿದ್ದುಪಡಿ.–** ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು, 1957ರ (ಇಲ್ಲಿ ಇನ್ನು ಮುಂದೆ ಸದರಿ ನಿಯಮಗಳೆಂದು ಉಲ್ಲೇಖಿಸಲಾಗಿದೆ) 9ನೇ ನಿಯಮದಲ್ಲಿ (ಬಿಬಿ) ಖಂಡದ ಬದಲಾಗಿ ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

"(ಬಿಬಿ) ಅಖಿಲ ಭಾರತ ಸೇವೆಗಳಿಗೆ ಸೇರಿರದ, ಆದರೆ 4,700–6,400 ರೂ.ಗಳಿಗಿಂತ ಕಡಿಮೆಯಿಲ್ಲದ (ಅಥವಾ ಕಾಲಕಾಲಕ್ಕೆ ಪರಿಷ್ಕೃತವಾಗಬಹುದಾದುದಕ್ಕೆ ಸಮಾನವಾದ) ವೇತನ ಶ್ರೇಣಿ ಹೊಂದಿರುವ ಇಲಾಖಾ ಮುಖ್ಯಸ್ಥರು ಮತ್ತು ಅಖಿಲ ಭಾರತ ಸೇವೆಗಳಿಗೆ ಸೇರಿದವರು ತಮ್ಮ ಆಡಳಿತ ನಿಯಂತ್ರಣದಲ್ಲಿ ಕೆಲಸ ನಿರ್ವಹಿಸುತ್ತಿರುವ 2,600–4575 ರೂಪಾಯಿಗಳಿಗಿಂತ ಹೆಚ್ಚಿಲ್ಲದ (ಅಥವಾ ಕಾಲಕಾಲಕ್ಕೆ ಪರಿಷ್ಕೃತವಾಗಬಹುದಾದಂತೆ ಅದಕ್ಕೆ ಸಮಾನವಾದ) ವೇತನ ಶ್ರೇಣಿ ಹೊಂದಿರುವ ಸಮೂಹ 'ಬಿ' ಹುದ್ದೆ ಅಥವಾ ಸಮೂಹ 'ಎ' ಹುದ್ದೆ ಹೊಂದಿರುವ ರಾಜ್ಯ ಸಿವಿಲ್ ಸೇವೆಯ ಸದಸ್ಯರ ಮೇಲೆ 8ನೇ ನಿಯಮದ (ii), (iii), (iiiಎ), (iv) ಮತ್ತು (ivಎ) ಖಂಡಗಳಲ್ಲಿ ನಿರ್ದಿಷ್ಟಪಡಿಸಿದ ದಂಡನೆಗಳಲ್ಲಿ ಯಾವುದೇ ದಂಡನೆಯನ್ನು ವಿಧಿಸಬಹುದು;

(ಬಿಬಿಬಿ) 4,700–6,400 ರೂ. ಗಳಿಗಿಂತ ಕಡಿಮೆ (ಅಥವಾ ಕಾಲಕಾಲಕ್ಕೆ ಪರಿಷ್ಕೃತ ವಾಗಬಹುದಾದುದಕ್ಕೆ ಸಮಾನವಾದ) ವೇತನ ಶ್ರೇಣಿ ಹೊಂದಿರುವ ಇಲಾಖಾ ಮುಖ್ಯಸ್ಥರು ಮತ್ತು ಅಖಿಲ ಭಾರತ ಸೇವೆಗಳಿಗೆ ಸೇರಿದವರು ತಮ್ಮ ಆಡಳಿತ ನಿಯಂತ್ರಣದಲ್ಲಿ ಕೆಲಸ ನಿರ್ವಹಿಸುತ್ತಿರುವ ರಾಜ್ಯ ಸಿವಿಲ್ ಸೇವೆಯಲ್ಲಿ ಸಮೂಹ ಬಿ ಹುದ್ದೆಯನ್ನು ಹೊಂದಿರುವ ಸದಸ್ಯರ ಮೇಲೆ 8ನೇ ನಿಯಮದ (ii), (iii), (iiiಎ), (iv) ಮತ್ತು (ivಎ) ಖಂಡಗಳಲ್ಲಿ ನಿರ್ದಿಷ್ಟಪಡಿಸಿದ ದಂಡನೆಗಳಲ್ಲಿ ಯಾವುದೇ ದಂಡನೆಯನ್ನು ವಿಧಿಸಬಹುದು;"

**3. 12ನೇ ನಿಯಮದ ತಿದ್ದುಪಡಿ.–** ಸದರಿ ನಿಯಮಗಳ 12ನೇ ನಿಯಮದಲ್ಲಿ (1)ನೇ ಉಪನಿಯಮದಲ್ಲಿ, (ಬಿ) ಖಂಡದ ನಂತರ, ಈ ಮುಂದಿನ ಪರಂತುಕವನ್ನು ಸೇರಿಸತಕ್ಕದ್ದು, ಎಂದರೆ:–

"ಪರಂತು, 11ನೇ ನಿಯಮದ (3)ರಿಂದ (23)ರವರೆಗಿನ ಉಪನಿಯಮಗಳಲ್ಲಿ ಗೊತ್ತುಪಡಿಸಿದ ರೀತಿಯಲ್ಲಿ ವಿಚಾರಣೆ ನಡೆಸದೆಯೇ, ಸಂಚಿತ ಪರಿಣಾಮ ಸಹಿತ ವೇತನ ಬಡ್ತಿಗಳನ್ನು ತಡೆಹಿಡಿಯುವ ದಂಡನೆಯನ್ನು ವಿಧಿಸುವ ಆದೇಶವನ್ನು ಮಾಡತಕ್ಕದ್ದಲ್ಲ."

**4. 26ನೇ ನಿಯಮದ ತಿದ್ದುಪಡಿ.–** ಸದರಿ ನಿಯಮಗಳ 26ನೇ ನಿಯಮದಲ್ಲಿ, "ಅದನ್ನು ತನ್ನ ಗಮನಕ್ಕೆ ತಂದಾಗ .........." ಎಂಬ ಪದಗಳ ನಂತರ "......... ಅಥವಾ ಯಾವುದೇ ದಂಡನೆಯನ್ನು ವಿಧಿಸಿರುವ ಆದೇಶವನ್ನು ಜಾರಿಗೊಳಿಸಲಾಗದೆಂದು ಅಥವಾ ದಂಡನೆಯನ್ನು ವಿಧಿಸಿರುವ ಆದೇಶವು ಕಾನೂನುಬದ್ಧವಾಗಿ ಸಿಂಧುವಾಗಿಲ್ಲವೆಂದು ತಾನು ಅಭಿಪ್ರಾಯಪಟ್ಟರೆ" ಎಂಬ ಪದಗಳನ್ನು ಸೇರಿಸತಕ್ಕದ್ದು.

**5. ಸಿಂಧುಗೊಳಿಸುವಿಕೆ.–** 1995ರ ಡಿಸೆಂಬರ್ 26ನೇ ದಿನದಂದು ಅಥವಾ ಆ ತರುವಾಯ, ಆದರೆ ಈ ನಿಯಮಗಳ ಪ್ರಕಟಣೆಗೆ ಮುಂಚೆ, ಈ ನಿಯಮಗಳ ಮೂಲಕ ತಿದ್ದುಪಡಿಯಾದ ಸದರಿ ನಿಯಮಗಳ 26ನೇ ನಿಯಮದ ಮೇರೆಗೆ ಮಾಡಿದ ಪ್ರತಿಯೊಂದು ಆದೇಶವು ಮತ್ತು ಮಾಡಿದ ಯಾವುದೇ ಕಾರ್ಯವು ಅಥವಾ ಕೈಗೊಂಡ ಯಾವುದೇ ಕ್ರಮವು, ಈ ನಿಯಮಗಳ ಮೂಲಕ ತಿದ್ದುಪಡಿಯಾದ ಸದರಿ ನಿಯಮಗಳ 26ನೇ ನಿಯಮದ ಉಪಬಂಧಗಳು ಅಂಥ ಆದೇಶವನ್ನು ಮಾಡಿದ್ದ, ಹೊರಡಿಸಿದ್ದ, ಕಾರ್ಯವನ್ನು ಮಾಡಿದ್ದ ಅಥವಾ ಕ್ರಮವನ್ನು ಕೈಗೊಂಡಿದ್ದ ಎಲ್ಲ ಸಂಬಂಧಪಟ್ಟ ಕಾಲದಲ್ಲಿ ಜಾರಿಯಲ್ಲಿದ್ದಿದ್ದರೆ ಹೇಗೋ ಹಾಗೆ ಸಿಂಧುವಾಗಿರತಕ್ಕದ್ದು ಮತ್ತು ಪರಿಣಾಮಕಾರಿಯಾಗಿರತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಎಲ್ ಜಯರಾಮ್**

ಸರ್ಕಾರದ ಅಧೀನ ಕಾರ್ಯದರ್ಶಿ–II

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ, (ಸೇವಾ ನಿಯಮಗಳು).

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

ಅಧಿಸೂಚನೆ

ಸಂಖ್ಯೆ. ಡಿಪಿಎಆರ್ 4 ಎಸ್‌ಡಿಇ 98, ಬೆಂಗಳೂರು, ದಿನಾಂಕ 30ನೇ ನವೆಂಬರ್, 1999.

ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು, 1957ನ್ನು ಮತ್ತಷ್ಟು ತಿದ್ದುಪಡಿ ಮಾಡಲು ಈ ಮುಂದಿನ ನಿಯಮಗಳ ಕರಡನ್ನು, ಅದರಿಂದ ಬಾಧಿತರಾಗುವ ಸಂಭವವಿರುವ ಎಲ್ಲಾ ವ್ಯಕ್ತಿಗಳಿಂದ, ಸರ್ಕಾರಿ ರಾಜ್ಯಪತ್ರದಲ್ಲಿ ಅದನ್ನು ಪ್ರಕಟಿಸಿದ ದಿನಾಂಕದಿಂದ 30 ದಿನಗಳೊಳಗಾಗಿ ಆಕ್ಷೇಪಣೆಗಳನ್ನು ಮತ್ತು ಸಲಹೆಗಳನ್ನು ಆಹ್ವಾನಿಸಿ, ಕರ್ನಾಟಕ ರಾಜ್ಯ ಸಿವಿಲ್ ಸೇವಾ ಅಧಿನಿಯಮ, 1978 (ಕರ್ನಾಟಕ ಅಧಿನಿಯಮ 1990ರ 14)ರ 3ನೇ ಪ್ರಕರಣದ (2)ನೇ ಉಪಪ್ರಕರಣದ (ಎ) ಖಂಡದ ಮೂಲಕ ಅಗತ್ಯಪಡಿಸಲಾದಂತೆ, ದಿನಾಂಕ 31ನೇ ಆಗಸ್ಟ್ 1999ರ ಕರ್ನಾಟಕ ವಿಶೇಷ ರಾಜ್ಯಪತ್ರದ ಭಾಗ–IV, ವಿಭಾಗ 2(ಸಿ) (i) ರಲ್ಲಿ ಅಧಿಸೂಚನೆ ಸಂಖ್ಯೆ ಡಿಪಿಎಆರ್ 4 ಎಸ್‌ಡಿಇ 98, ದಿನಾಂಕ 21ನೇ ಆಗಸ್ಟ್ 1999 ರಲ್ಲಿ ಪ್ರಕಟಿಸಿರುವುದರಿಂದ;

ಸದರಿ ರಾಜ್ಯಪತ್ರವನ್ನು 1999ರ ಆಗಸ್ಟ್ 31 ರಂದು ಸಾರ್ವಜನಿಕರಿಗೆ ಲಭ್ಯವಾಗುವಂತೆ ಮಾಡಿರುವುದರಿಂದ;

ಮತ್ತು, ಸದರಿ ಕರಡಿನ ಬಗ್ಗೆ ರಾಜ್ಯ ಸರ್ಕಾರಕ್ಕೆ ಯಾವ ಸಲಹೆಗಳೂ ಅಥವಾ ಆಕ್ಷೇಪಣೆಗಳೂ ಬಾರದಿರುವುದರಿಂದ;

ಈಗ, ಕರ್ನಾಟಕ ರಾಜ್ಯ ಸಿವಿಲ್ ಸೇವಾ ಅಧಿನಿಯಮ, 1978 (ಕರ್ನಾಟಕ ಅಧಿನಿಯಮ 1990ರ 14)ರ 8ನೇ ಪ್ರಕರಣದೊಂದಿಗೆ ಓದಿಕೊಂಡ 3ನೇ ಪ್ರಕರಣದ (1)ನೇ ಉಪಪ್ರಕರಣದಿಂದ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಈ ಮೂಲಕ ಈ ಮುಂದಿನ ನಿಯಮಗಳನ್ನು ರಚಿಸುತ್ತದೆ, ಎಂದರೆ:–

**1. ಹೆಸರು ಮತ್ತು ಪ್ರಾರಂಭ.–** (1) ಈ ನಿಯಮಗಳನ್ನು ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) (ಎರಡನೇ ತಿದ್ದುಪಡಿ) ನಿಯಮಗಳು, 1990 ಎಂದು ಕರೆಯತಕ್ಕದ್ದು.

(2) ಅವು, ಸರ್ಕಾರಿ ರಾಜ್ಯಪತ್ರದಲ್ಲಿ ಅವುಗಳನ್ನು ಪ್ರಕಟಿಸಿದ ದಿನಾಂಕದಂದು ಜಾರಿಗೆ ಬರತಕ್ಕದ್ದು.

**2. Iನೇ ಅನುಸೂಚಿಯ ತಿದ್ದುಪಡಿ.–** ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು, 1957ರ (ಇಲ್ಲಿ ಇನ್ನು ಮುಂದೆ ಸದರಿ ನಿಯಮಗಳೆಂದು ಉಲ್ಲೇಖಿಸಲಾಗಿದೆ) Iನೇ ಅನುಸೂಚಿಯಲ್ಲಿ, 38ನೇ ಕ್ರಮಸಂಖ್ಯೆಯ ಮತ್ತು ಅದಕ್ಕೆ ಸಂಬಂಧಪಟ್ಟ ನಮೂದುಗಳ ನಂತರ ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

"39. ಕರ್ನಾಟಕ ಗ್ರಾಹಕ ಸಂರಕ್ಷಣಾ ರಾಜ್ಯ ಆಯೋಗ ಮತ್ತು ಜಿಲ್ಲಾ ವೇದಿಕೆ ಸೇವೆ".

**3. IIನೇ ಅನುಸೂಚಿಯ ತಿದ್ದುಪಡಿ.–** ಸದರಿ ನಿಯಮಗಳ IIನೇ ಅನುಸೂಚಿಯಲ್ಲಿ, "ಆಹಾರ ಮತ್ತು ನಾಗರಿಕ ಸರಬರಾಜು ಇಲಾಖೆ" ಎಂಬ ಶೀರ್ಷಿಕೆಯ ಅಡಿಯಲ್ಲಿ ಇರುವ ನಮೂದುಗಳ ನಂತರ, ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

"ಕರ್ನಾಟಕ ಗ್ರಾಹಕರ ಸಂರಕ್ಷಣಾ ರಾಜ್ಯ ಆಯೋಗ ಮತ್ತು ಜಿಲ್ಲಾ ವೇದಿಕೆ ಸೇವೆ".

| | | | | |
|---|---|---|---|---|
| ಶಿರಸ್ತೇದಾರ, ಪ್ರಥಮ ದರ್ಜೆ ಸಹಾಯಕ, ಶೀಘ್ರಲಿಪಿಗಾರ, ದ್ವಿತೀಯ ದರ್ಜೆ ಸಹಾಯಕ, ಬೆರಳಚ್ಚುಗಾರರು ಮತ್ತು ವಾಹನ ಚಾಲಕ | ಅಧ್ಯಕ್ಷರು | ರಿಜಿಸ್ಟ್ರಾರ್<br>ಅಧ್ಯಕ್ಷರು | (ii)ರಿಂದ (ivಎ)<br>(v)ರಿಂದ (viii) | ಅಧ್ಯಕ್ಷರು<br>ಸರ್ಕಾರ |
| ಲೆಕ್ಕ ಪತ್ರಗಳ ಅಧೀಕ್ಷಕರು | ನಿಯಂತ್ರಕರು, ರಾಜ್ಯ ಲೆಕ್ಕ ಪತ್ರಗಳ ಇಲಾಖೆ | ರಿಜಿಸ್ಟ್ರಾರ್ | (ii),(iii),(iiiಎ),(iv) ಮತ್ತು (ivಎ) | ಅಧ್ಯಕ್ಷರು |
| | ನಿಯಂತ್ರಕರು, ರಾಜ್ಯ ಲೆಕ್ಕಪತ್ರಗಳ ಇಲಾಖೆ | ನಿಯಂತ್ರಕರು, ರಾಜ್ಯ ಲೆಕ್ಕ ಪತ್ರಗಳ ಇಲಾಖೆ | (v) ರಿಂದ (viii) | ಸರ್ಕಾರ |

**4. IIIನೇ ಅನುಸೂಚಿಯ ತಿದ್ದುಪಡಿ.–** ಸದರಿ ನಿಯಮಗಳ IIIನೇ ಅನುಸೂಚಿಯಲ್ಲಿ "ಆಹಾರ ಮತ್ತು ನಾಗರಿಕ ಸರಬರಾಜು ಇಲಾಖೆ" ಎಂಬ ಶೀರ್ಷಿಕೆಯ ಅಡಿಯಲ್ಲಿ ಇರುವ ನಮೂದುಗಳ ನಂತರ, ಈ ಮುಂದಿನ ನಮೂದುಗಳನ್ನು ಸೇರಿಸತಕ್ಕದ್ದು, ಎಂದರೆ:–

"ಕರ್ನಾಟಕ ಗ್ರಾಹಕರ ಸಂರಕ್ಷಣಾ ರಾಜ್ಯ ಆಯೋಗ ಮತ್ತು ಜಿಲ್ಲಾ ವೇದಿಕೆ ಸೇವೆಗಳು".

| | | | | |
|---|---|---|---|---|
| ಎಲ್ಲ 'ಡಿ' ಸಮೂಹದ ನೌಕರರು | ಅಧ್ಯಕ್ಷರು | ರಿಜಿಸ್ಟ್ರಾರ್ | (i) ರಿಂದ (viii) | ಅಧ್ಯಕ್ಷರು |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಎಲ್ ಜಯರಾಮ್**

ಸರ್ಕಾರದ ಅಧೀನ ಕಾರ್ಯದರ್ಶಿ–II

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ, (ಸೇವಾ ನಿಯಮಗಳು).

**ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ**

**ಅಧಿಸೂಚನೆ**

ಸಂಖ್ಯೆ. ಡಿಪಿಎಆರ್ 7 ಎಸ್‌ಡಿಇ 99, ಬೆಂಗಳೂರು, ದಿನಾಂಕ 14ನೇ ಮಾರ್ಚ್, 2000

ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು, 1957ರ 10ನೇ ನಿಯಮದ (1)ನೇ ಉಪನಿಯಮದಿಂದ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ ಮತ್ತು ಅಧಿಸೂಚನೆ ಸಂಖ್ಯೆ ಡಿಪಿಎಆರ್ 38, ಎಸ್‌ಎಸ್‌ಆರ್ 74 (1), ದಿನಾಂಕ 19ನೇ ಅಕ್ಟೋಬರ್, 1974 ರಲ್ಲಿ ಮತ್ತು ಅಧಿಸೂಚನೆ ಸಂಖ್ಯೆ ಡಿಪಿಎಆರ್ 15 ಎಸ್‌ಡಿಇ 96, ದಿನಾಂಕ 20ನೇ ಜೂನ್ 1997ರಲ್ಲಿ ಸರ್ಕಾರದ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಲಾದ ಅಧಿಕಾರಗಳಿಗೆ ಬಾಧಕವಾಗದಂತೆ, ಕರ್ನಾಟಕ ಸರ್ಕಾರವು ಸರ್ಕಾರದ ಎಲ್ಲ ಅಪರ ಕಾರ್ಯದರ್ಶಿಗಳಿಗೆ, ಜಂಟಿ ಕಾರ್ಯದರ್ಶಿಗಳಿಗೆ ಮತ್ತು ಉಪಕಾರ್ಯದರ್ಶಿಗಳಿಗೆ ಕರ್ನಾಟಕ ಸರ್ಕಾರದ ಸಚಿವಾಲಯ ಸೇವೆಗೆ ಸೇರಿದ ಸಮೂಹ "ಸಿ" ಅಥವಾ "ಡಿ" ಹುದ್ದೆಗಳನ್ನು ಧಾರಣ ಮಾಡಿರುವ ಮತ್ತು ಅವರ ನಿಯಂತ್ರಣದಲ್ಲಿ ಕೆಲಸ ಮಾಡುತ್ತಿರುವ ಯಾರೇ ಸರ್ಕಾರಿ ನೌಕರನನ್ನು ಅಮಾನತ್ತಿನಲ್ಲಿಡಲು ಈ ಮೂಲಕ ಅಧಿಕಾರ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಎಲ್ ಜಯರಾಮ್**

ಸರ್ಕಾರದ ಅಧೀನ ಕಾರ್ಯದರ್ಶಿ–II

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ,

(ಸೇವಾ ನಿಯಮಗಳು).

**ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ**

**ಅಧಿಸೂಚನೆ**

ಸಂಖ್ಯೆ. ಡಿಪಿಎಆರ್ 3 ಎಸ್‌ಡಿಇ 2000, ಬೆಂಗಳೂರು, ದಿನಾಂಕ 30ನೇ ಮೇ 2000.

ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು, 1957ರ 7ನೇ ನಿಯಮದ (1)ನೇ ಉಪನಿಯಮದ ಪರಂತುಕದಿಂದ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು, ರಾಜ್ಯ ಲೆಕ್ಕಪತ್ರಗಳ ಇಲಾಖೆಯ ಅಧೀಕ್ಷಕರ ಹುದ್ದೆಗೆ ಸಂಬಂಧಿಸಿದಂತೆ ರಾಜ್ಯ ಲೆಕ್ಕಪತ್ರಗಳ ಇಲಾಖೆಯ ನಿಯಂತ್ರಕರನ್ನು ಕೂಡಲೇ ಜಾರಿಗೆ ಬರುವಂತೆ ನೇಮಕ ಪ್ರಾಧಿಕಾರಿಯೆಂದು ಈ ಮೂಲಕ ನಿರ್ದಿಷ್ಟಪಡಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಎಲ್ ಜಯರಾಮ್**

ಸರ್ಕಾರದ ಅಧೀನ ಕಾರ್ಯದರ್ಶಿ–II

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ,

(ಸೇವಾ ನಿಯಮಗಳು).

**ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ**

**ಅಧಿಸೂಚನೆ**

ಸಂಖ್ಯೆ. ಡಿಪಿಎಆರ್ 37 ಎಸ್‌ಡಿಇ 2001, ಬೆಂಗಳೂರು, ದಿನಾಂಕ 26ನೇ ಡಿಸೆಂಬರ್, 2001.

ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು, 1957ನ್ನು ಮತ್ತಷ್ಟು ತಿದ್ದುಪಡಿ ಮಾಡಲು ಈ ಮುಂದಿನ ನಿಯಮಗಳ ಕರಡನ್ನು, ಅದರಿಂದ ಬಾಧಿತರಾಗುವ ಸಂಭವವಿರುವ ಎಲ್ಲಾ ವ್ಯಕ್ತಿಗಳಿಂದ, ಸರ್ಕಾರಿ ರಾಜ್ಯಪತ್ರದಲ್ಲಿ ಅದನ್ನು ಪ್ರಕಟಿಸಿದ ದಿನಾಂಕದಿಂದ 30 ದಿನಗಳೊಳಗಾಗಿ ಆಕ್ಷೇಪಣೆಗಳನ್ನು ಮತ್ತು ಸಲಹೆಗಳನ್ನು ಆಹ್ವಾನಿಸಿ, ಕರ್ನಾಟಕ ರಾಜ್ಯ ಸಿವಿಲ್ ಸೇವಾ ಅಧಿನಿಯಮ, 1978 (ಕರ್ನಾಟಕ ಅಧಿನಿಯಮ 1990ರ 14)ರ 3ನೇ ಪ್ರಕರಣದ (2)ನೇ ಉಪಪ್ರಕರಣದ (ಎ) ಖಂಡದ ಮೂಲಕ ಅಗತ್ಯಪಡಿಸಲಾದಂತೆ, ದಿನಾಂಕ 6ನೇ ನವೆಂಬರ್ 2001ರ ಕರ್ನಾಟಕ ವಿಶೇಷ ರಾಜ್ಯಪತ್ರದ ಭಾಗ–IV, ವಿಭಾಗ 2(ಸಿ) (i) ರಲ್ಲಿ ಅಧಿಸೂಚನೆ ಸಂಖ್ಯೆ ಡಿಪಿಎಆರ್ 37 ಎಸ್‌ಡಿಇ 2001, ದಿನಾಂಕ 2ನೇ ನವೆಂಬರ್ 2001 ರಲ್ಲಿ ಪ್ರಕಟಿಸಿರುವುದರಿಂದ;

ಸದರಿ ರಾಜ್ಯಪತ್ರವನ್ನು 2001ರ ನವೆಂಬರ್ 6 ರಂದು ಸಾರ್ವಜನಿಕರಿಗೆ ಲಭ್ಯವಾಗುವಂತೆ ಮಾಡಿರುವುದರಿಂದ;

ಮತ್ತು, ಸದರಿ ಕರಡು ನಿಯಮಗಳ ಬಗ್ಗೆ ರಾಜ್ಯ ಸರ್ಕಾರಕ್ಕೆ ಯಾವ ಆಕ್ಷೇಪಣೆಗಳೂ ಅಥವಾ ಸಲಹೆಗಳೂ ಬಾರದಿರುವುದರಿಂದ;

ಈಗ, ಕರ್ನಾಟಕ ರಾಜ್ಯ ಸಿವಿಲ್ ಸೇವಾ ಅಧಿನಿಯಮ, 1978 (ಕರ್ನಾಟಕ ಅಧಿನಿಯಮ 1990ರ 14)ರ 8ನೇ ಪ್ರಕರಣದೊಂದಿಗೆ ಓದಿಕೊಂಡ 3ನೇ ಪ್ರಕರಣದ (1)ನೇ ಉಪಪ್ರಕರಣದಿಂದ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಈ ಮೂಲಕ ಈ ಮುಂದಿನ ನಿಯಮಗಳನ್ನು ರಚಿಸುತ್ತದೆ, ಎಂದರೆ:–

**1. ಹೆಸರು ಮತ್ತು ಪ್ರಾರಂಭ.**– (1) ಈ ನಿಯಮಗಳನ್ನು ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) (ಎರಡನೇ ತಿದ್ದುಪಡಿ) ನಿಯಮಗಳು, 2001 ಎಂದು ಕರೆಯತಕ್ಕದ್ದು.

(2) ಅವು, ಸರ್ಕಾರಿ ರಾಜ್ಯಪತ್ರದಲ್ಲಿ ಅವುಗಳನ್ನು ಪ್ರಕಟಿಸಿದ ದಿನಾಂಕದಂದು ಜಾರಿಗೆ ಬರತಕ್ಕದ್ದು.

**2. 14ಎ. ನಿಯಮದ ತಿದ್ದುಪಡಿ.**– ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು, 1957ರ 14ಎ ನಿಯಮದ (2)ನೇ ಉಪನಿಯಮದ, (ಇ) ಖಂಡದಲ್ಲಿ "11ನೇ ನಿಯಮದ (21)ನೇ ಉಪನಿಯಮದ ಮತ್ತು (23)ನೇ ಉಪನಿಯಮದ ಮತ್ತು" ಎಂಬ ಪದಗಳನ್ನು, ಆವರಣಗಳನ್ನು ಮತ್ತು ಅಂಕಿಗಳನ್ನು ಬಿಟ್ಟುಬಿಡತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಎಲ್. ಜಯರಾಮ್**

ಸರ್ಕಾರದ ಅಧೀನ ಕಾರ್ಯದರ್ಶಿ–II

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ,

(ಸೇವಾ ನಿಯಮಗಳು).

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

## ಅಧಿಸೂಚನೆ

ಸಂಖ್ಯೆ. ಡಿಪಿಎಆರ್ 26 ಎಸ್‌ಡಿಇ 2001, ಬೆಂಗಳೂರು, ದಿನಾಂಕ 7ನೇ ಡಿಸೆಂಬರ್ 2001.

ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು, 1957ರ 10ನೇ ನಿಯಮದ (1)ನೇ ಉಪನಿಯಮದಿಂದ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ಆಯುಕ್ತರಿಗೆ ಜನರಲ್ ಡ್ಯೂಟಿ ಮೆಡಿಕಲ್ ಆಫೀಸರುಗಳನ್ನು ಅಮಾನತ್ತಿನಲ್ಲಿಡಲು ಈ ಮೂಲಕ ಅಧಿಕಾರವನ್ನು ನೀಡುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಎಲ್ ಜಯರಾಮ್**

ಸರ್ಕಾರದ ಅಧೀನ ಕಾರ್ಯದರ್ಶಿ–II

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ,

(ಸೇವಾ ನಿಯಮಗಳು).

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

## ಅಧಿಸೂಚನೆ

ಸಂಖ್ಯೆ. ಡಿಪಿಎಆರ್ 19 ಎಸ್‌ಡಿಇ 95, ಬೆಂಗಳೂರು, ದಿನಾಂಕ 7ನೇ ಮಾರ್ಚ್ 2002

ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು, 1957ನ್ನು ಮತ್ತಷ್ಟು ತಿದ್ದುಪಡಿ ಮಾಡಲು ಈ ಮುಂದಿನ ನಿಯಮಗಳ ಕರಡನ್ನು, ಅದರಿಂದ ಬಾಧಿತರಾಗುವ ಸಂಭವವಿರುವ ಎಲ್ಲಾ ವ್ಯಕ್ತಿಗಳಿಂದ, ಸರ್ಕಾರಿ ರಾಜ್ಯಪತ್ರದಲ್ಲಿ ಅದನ್ನು ಪ್ರಕಟಿಸಿದ ದಿನಾಂಕದಿಂದ 30 ದಿನಗಳೊಳಗಾಗಿ ಆಕ್ಷೇಪಣೆಗಳನ್ನು ಮತ್ತು ಸಲಹೆಗಳನ್ನು ಆಹ್ವಾನಿಸಿ, ಕರ್ನಾಟಕ ರಾಜ್ಯ ಸಿವಿಲ್ ಸೇವಾ ಅಧಿನಿಯಮ, 1978 (ಕರ್ನಾಟಕ ಅಧಿನಿಯಮ 1990ರ 14)ರ 3ನೇ ಪ್ರಕರಣದ (2)ನೇ ಉಪಪ್ರಕರಣದ (ಎ) ಖಂಡದ ಮೂಲಕ ಅಗತ್ಯಪಡಿಸಲಾದಂತೆ, ದಿನಾಂಕ 31ನೇ ಜನವರಿ 2002ರ ಕರ್ನಾಟಕ ವಿಶೇಷ ರಾಜ್ಯಪತ್ರದ ಭಾಗ–IVಎ (ಪಿ.ಆರ್. ಸಂಖ್ಯೆ. 2102) ರಲ್ಲಿ ಅಧಿಸೂಚನೆ ಸಂಖ್ಯೆ ಡಿಪಿಎಆರ್ 19 ಎಸ್‌ಡಿಇ 95, ದಿನಾಂಕ 22ನೇ ಡಿಸೆಂಬರ್ 2001 ರಲ್ಲಿ ಪ್ರಕಟಿಸಿರುವುದರಿಂದ;

ಸದರಿ ರಾಜ್ಯಪತ್ರವನ್ನು 2002ರ ಜನವರಿ 31 ರಂದು ಸಾರ್ವಜನಿಕರಿಗೆ ಲಭ್ಯವಾಗುವಂತೆ ಮಾಡಿರುವುದರಿಂದ;

ಮತ್ತು, ಸದರಿ ಕರಡು ನಿಯಮಗಳ ಬಗ್ಗೆ ರಾಜ್ಯಸರ್ಕಾರಕ್ಕೆ ಯಾವ ಆಕ್ಷೇಪಣೆಗಳೂ ಮತ್ತು ಸಲಹೆಗಳೂ ಬಾರದಿರುವುದರಿಂದ;

ಈಗ ಕರ್ನಾಟಕ ರಾಜ್ಯ ಸಿವಿಲ್ ಸೇವಾ ಅಧಿನಿಯಮ, 1978 (ಕರ್ನಾಟಕ ಅಧಿನಿಯಮ, 1990ರ 14)ರ 8ನೇ ಪ್ರಕರಣದೊಂದಿಗೆ ಓದಿಕೊಂಡ 3ನೇ ಪ್ರಕರಣದ (1)ನೇ ಉಪಪ್ರಕರಣದಿಂದ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಈ ಮೂಲಕ ಈ ಮುಂದಿನ ನಿಯಮಗಳನ್ನು ರಚಿಸುತ್ತದೆ, ಎಂದರೆ:–

**1. ಹೆಸರು ಮತ್ತು ಪ್ರಾರಂಭ.**– (1) ಈ ನಿಯಮಗಳನ್ನು ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) (ನಾಲ್ಕನೇ ತಿದ್ದುಪಡಿ) ನಿಯಮಗಳು, 2001 ಎಂದು ಕರೆಯತಕ್ಕದ್ದು.

(2) ಅವು, ಸರ್ಕಾರಿ ರಾಜ್ಯಪತ್ರದಲ್ಲಿ ಅವುಗಳನ್ನು ಪ್ರಕಟಿಸಿದ ದಿನಾಂಕದಂದು ಜಾರಿಗೆ ಬರತಕ್ಕದ್ದು.

**2. 11ನೇ ನಿಯಮದ ತಿದ್ದುಪಡಿ.–** ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು, 1957ರ (ಇಲ್ಲಿ ಇನ್ನು ಮುಂದೆ ಸದರಿ ನಿಯಮಗಳೆಂದು ಉಲ್ಲೇಖಿಸಲಾಗಿದೆ) 11ನೇ ನಿಯಮದಲ್ಲಿ (22)ನೇ ಉಪನಿಯಮದ ನಂತರ, ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

"(22ಎ) ಈ ನಿಯಮಗಳಲ್ಲಿ ಏನೇ ಒಳಗೊಂಡಿದ್ದರೂ, ಶಿಸ್ತು ವ್ಯವಹರಣೆಯನ್ನು ಎದುರಿಸುತ್ತಿರುವ ಸರ್ಕಾರಿ ನೌಕರನನ್ನು, ಅಂಥ ಶಿಸ್ತು ವ್ಯವಹರಣೆಯನ್ನು ಪ್ರಾರಂಭಿಸಿದ ಶಿಸ್ತು ಪ್ರಾಧಿಕಾರಿಯ ಅಧಿಕಾರ ವ್ಯಾಪ್ತಿಯ ಹೊರಗೆ ವರ್ಗಾವಣೆ ಮಾಡಿದ್ದರೆ, ಪ್ರತಿನಿಯೋಜಿಸಿದ್ದರೆ ಅಥವಾ ಅನ್ಯಥಾ ಸ್ಥಳನಿಯುಕ್ತಿ ಮಾಡಿದ್ದರೆ, ಅದೇ ಪ್ರಾಧಿಕಾರಿಯು ಈ ನಿಯಮಗಳಿಗನುಸಾರವಾಗಿ, ಅಂಥ ಸರ್ಕಾರಿ ನೌಕರನ ಮೇಲಿನ ಆರೋಪಗಳ ವಿಷಯಗಳ ಬಗ್ಗೆ ವಿಚಾರಣೆಯನ್ನು ಮುಂದುವರಿಸತಕ್ಕದ್ದು ಮತ್ತು ಮುಕ್ತಾಯಗೊಳಿಸತಕ್ಕದ್ದು ಅಥವಾ ಮುಂದುವರಿಯುವಂತೆ ಮಾಡತಕ್ಕದ್ದು ಮತ್ತು ಮುಕ್ತಾಯಗೊಳಿಸುವಂತೆ ಮಾಡತಕ್ಕದ್ದು ಮತ್ತು ಸರ್ಕಾರಿ ನೌಕರನು ಯಾರ ಅಧಿಕಾರ ವ್ಯಾಪ್ತಿಯೊಳಗೆ ಪ್ರಸ್ತುತ ಕೆಲಸ ಮಾಡುತ್ತಿರುವನೋ ಆ ಶಿಸ್ತು ಪ್ರಾಧಿಕಾರಿಗೆ ವ್ಯವಹರಣೆಗಳ ಸಂಪೂರ್ಣ ದಾಖಲೆಯನ್ನು ಕಳಿಸತಕ್ಕದ್ದು ಮತ್ತು ಆ ತರುವಾಯ ಆ ಶಿಸ್ತು ಪ್ರಾಧಿಕಾರಿಯು ದಾಖಲೆಯಲ್ಲಿನ ಸಾಕ್ಷ್ಯದ ಆಧಾರದ ಮೇಲೆ ಅಥವಾ ನ್ಯಾಯದ ಹಿತದೃಷ್ಟಿಯಿಂದ ಸಾಕ್ಷಿದಾರರ ಪೈಕಿ ಯಾರೇ ಸಾಕ್ಷಿದಾರರನ್ನು ಮತ್ತಷ್ಟು ವಿಚಾರಣೆ ಮಾಡುವುದು ಅವಶ್ಯವೆಂದು ಅಭಿಪ್ರಾಯಪಟ್ಟರೆ, ಸಾಕ್ಷಿದಾರನನ್ನು ಪುನಃ ಕರೆಸಬಹುದು, ವಿಚಾರಣೆ ಮಾಡಬಹುದು, ಪಾಟೀ ಸವಾಲು ಮಾಡಬಹುದು ಅಥವಾ ಮರು ವಿಚಾರಣೆ ಮಾಡಬಹುದು ಮತ್ತು ಈ ನಿಯಮಗಳಿಗನುಸಾರವಾಗಿ, ತಾನು ಸೂಕ್ತವೆಂದು ಭಾವಿಸಬಹುದಾದಂಥ ಆದೇಶವನ್ನು ಹೊರಡಿಸಬಹುದು."

**3. 15ನೇ ನಿಯಮದ ತಿದ್ದುಪಡಿ.–** ಸದರಿ ನಿಯಮಗಳ 15ನೇ ನಿಯಮದಲ್ಲಿ (2ಎ) ಮತ್ತು (3)ನೇ ಉಪನಿಯಮಗಳ ಬದಲಾಗಿ ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

(2ಎ) ಈ ನಿಯಮಗಳಲ್ಲಿ ಏನೇ ಒಳಗೊಂಡಿದ್ದರೂ,–

(i) ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ, 1993ರ 155ನೇ ಅಥವಾ 196ನೇ ಪ್ರಕರಣದ ಮೇರೆಗೆ, ಸರ್ಕಾರದ ಗ್ರಾಮೀಣ ಅಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯು ಹೊರಡಿಸಿದ ಆದೇಶದ ಮೂಲಕ, ಜಿಲ್ಲಾ ಪಂಚಾಯಿತಿಗೆ ಅಥವಾ ತಾಲೂಕು ಪಂಚಾಯಿತಿಗೆ ಸಮೂಹ 'ಎ' ಅಥವಾ 'ಬಿ' ಹುದ್ದೆ ಹೊಂದಿರುವ ಯಾವ ಸರ್ಕಾರಿ ನೌಕರನ ಸೇವೆಯನ್ನು ಎರವಲು ಕೊಡಲಾಗಿದೆಯೋ ಆ ಸರ್ಕಾರಿ ನೌಕರನಿಗೆ ಸಂಬಂಧಪಟ್ಟಂತೆ ಸರ್ಕಾರದ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯು;

(ii) ಜಿಲ್ಲಾ ಪಂಚಾಯಿತಿಯ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಯು,–

(ಎ) (i)ನೇ ಖಂಡದಲ್ಲಿ ಉಲ್ಲೇಖಿಸಿದ ಸರ್ಕಾರಿ ನೌಕರರನ್ನು ಹೊರತುಪಡಿಸಿ ಸಮೂಹ 'ಬಿ' ಹುದ್ದೆಯನ್ನು ಅಥವಾ ಸಮೂಹ 'ಸಿ' ಹುದ್ದೆಯನ್ನು ಅಥವಾ ಸಮೂಹ 'ಡಿ' ಹುದ್ದೆಯನ್ನು ಹೊಂದಿರುವ ಯಾವ ಸರ್ಕಾರಿ ನೌಕರನ ಸೇವೆಯನ್ನು ಜಿಲ್ಲಾ ಪಂಚಾಯಿತಿಗೆ, ತಾಲೂಕು ಪಂಚಾಯತಿಗೆ ಅಥವಾ ಗ್ರಾಮ ಪಂಚಾಯಿತಿಗೆ ಎರವಲು ನೀಡಲಾಗಿದೆಯೋ ಆ ಸರ್ಕಾರಿ ನೌಕರನಿಗೆ ಸಂಬಂಧಪಟ್ಟಂತೆ;

(ಬಿ) ಕರ್ನಾಟಕ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯದ ಸದಸ್ಯನಾಗಿರುವ, ಪ್ರಾಥಮಿಕ ಆರೋಗ್ಯ ಕೇಂದ್ರದಲ್ಲಿ ಕೆಲಸ ಮಾಡುತ್ತಿರುವ ಯಾರೇ ವೈದ್ಯನಿಗೆ ಸಂಬಂಧಪಟ್ಟಂತೆ

– ಅಂಥ ಸರ್ಕಾರಿ ನೌಕರನನ್ನು ಅಮಾನತಿನಲ್ಲಿಡಲು ನೇಮಕ ಪ್ರಾಧಿಕಾರಿಯ ಅಧಿಕಾರಗಳನ್ನು ಮತ್ತು ಅವನ ವಿರುದ್ಧ ಶಿಸ್ತು ವ್ಯವಹರಣೆಗಳನ್ನು ಕೈಗೊಳ್ಳುವ ಉದ್ದೇಶಕ್ಕಾಗಿ ಶಿಸ್ತು ಪ್ರಾಧಿಕಾರಿಯ ಅಧಿಕಾರಗಳನ್ನು ಮತ್ತು ಅಂಥ ಸರ್ಕಾರಿ ನೌಕರನ ಮೇಲೆ 8ನೇ ನಿಯಮದ (i) ರಿಂದ (ivಎ) ವರೆಗಿನ ಖಂಡಗಳಲ್ಲಿ ನಿರ್ದಿಷ್ಟಪಡಿಸಿದ ದಂಡನೆಗಳಲ್ಲಿ ಯಾವುದೇ ದಂಡನೆಯನ್ನು ವಿಧಿಸಲು ಶಿಸ್ತು ಪ್ರಾಧಿಕಾರಿಯ ಅಧಿಕಾರಗಳನ್ನು ಹೊಂದಿರತಕ್ಕದ್ದು. ಅಂಥ ಸರ್ಕಾರಿ ನೌಕರನನ್ನು ಅಮಾನತಿನಲ್ಲಿಡುವುದಕ್ಕೆ ಅಥವಾ ಸದರಿ ದಂಡನೆಗಳಲ್ಲಿ ಯಾವುದೇ ದಂಡನೆಯನ್ನು ಅವನಿಗೆ ವಿಧಿಸುವುದಕ್ಕೆ ಮುಂಚೆ, ಎರವಲು ಕೊಟ್ಟ ಪ್ರಾಧಿಕಾರಿಯ ಅಥವಾ ಸಂದರ್ಭಾನುಸಾರ, ನೇಮಕ ಪ್ರಾಧಿಕಾರಿಯ ಅನುಮೋದನೆ ಪಡೆಯುವುದು ಮತ್ತು ಅವರೊಡನೆ ಸಮಾಲೋಚಿಸುವುದು, ಸರ್ಕಾರದ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಗೆ ಅಥವಾ ಜಿಲ್ಲಾ ಪಂಚಾಯತಿಯ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗೆ ಅವಶ್ಯಕವಾಗಿರತಕ್ಕದ್ದಲ್ಲ.

(3) ಈ ನಿಯಮಗಳಲ್ಲಿ ಏನೇ ಒಳಗೊಂಡಿದ್ದರೂ, (2ಎ) ಉಪನಿಯಮದಲ್ಲಿ ಉಲ್ಲೇಖಿಸಿರುವ ಸರ್ಕಾರಿ ನೌಕರನು,–

(i) ಜಿಲ್ಲಾ ಪಂಚಾಯತಿಯಲ್ಲಿ, ತಾಲೂಕು ಪಂಚಾಯತಿಯಲ್ಲಿ ಅಥವಾ ಗ್ರಾಮ ಪಂಚಾಯತಿಯಲ್ಲಿ ಸೇವೆ ಸಲ್ಲಿಸುತ್ತಿರುವಾಗ ಯಾವುದೇ ದುರ್ನಡತೆಯನ್ನು ಅಥವಾ ದುರ್ವರ್ತನೆಯನ್ನು ಎಸಗಿರುವ ಆರೋಪಕ್ಕೆ ಒಳಗಾಗಿದ್ದಾಗ, ಅಂಥ ಸರ್ಕಾರಿ ನೌಕರನ ವಿರುದ್ಧ ಯಾವುದೇ ಶಿಸ್ತು ವ್ಯವಹರಣೆಯನ್ನು ಪ್ರಾರಂಭಿಸುವುದಕ್ಕೆ ಮುಂಚೆ (2ಎ) ಉಪನಿಯಮದಲ್ಲಿ ಉಲ್ಲೇಖಿಸಿದ ಶಿಸ್ತು ಪ್ರಾಧಿಕಾರಿಯ ಅಧಿಕಾರ ವ್ಯಾಪ್ತಿಯಿಂದ ಹೊರಗೆ ವರ್ಗಾವಣೆ ಮಾಡಿದರೆ, ಪ್ರತಿನಿಯೋಜಿಸಿದರೆ ಅಥವಾ ಅನ್ಯಥಾ ಸ್ಥಳ ನಿಯುಕ್ತಿ ಮಾಡಿದರೆ, ಅದೇ ಶಿಸ್ತು ಪ್ರಾಧಿಕಾರಿಯು ಅಂಥ ಸರ್ಕಾರಿ ನೌಕರನ ವಿರುದ್ಧ ಶಿಸ್ತು ವ್ಯವಹರಣೆಯನ್ನು ಪ್ರಾರಂಭಿಸಲು ಮತ್ತು ಅವನ ಮೇಲಣ ಆರೋಪ ವಿಷಯಗಳ ಬಗ್ಗೆ ವಿಚಾರಣೆಯನ್ನು ಮುಕ್ತಾಯಗೊಳಿಸಲು ಅಥವಾ ಮುಕ್ತಾಯಗೊಳಿಸುವಂತೆ ಮಾಡಲು ಮತ್ತು ಅಂಥ ಸರ್ಕಾರಿ ನೌಕರನ ಮೇಲೆ 8ನೇ ನಿಯಮದ (i) ರಿಂದ (ivಎ) ವರೆಗಿನ ಖಂಡಗಳಲ್ಲಿ ನಿರ್ದಿಷ್ಟಪಡಿಸಿದ ದಂಡನೆಗಳಲ್ಲಿ ಯಾವುದೇ ದಂಡನೆಯನ್ನು ವಿಧಿಸಲು ಅಧಿಕಾರ ಹೊಂದಿರತಕ್ಕದ್ದು;

(ii) ಶಿಸ್ತು ವ್ಯವಹರಣೆಯನ್ನು ಎದುರಿಸುತ್ತಿರುವಾಗ, ಅಂಥ ಸರ್ಕಾರಿ ನೌಕರನ ವಿರುದ್ಧ ಶಿಸ್ತು ವ್ಯವಹರಣೆಯನ್ನು ಪ್ರಾರಂಭಿಸಿದ್ದ (2ಎ) ಉಪನಿಯಮದಲ್ಲಿ ಉಲ್ಲೇಖಿಸಿದ ಶಿಸ್ತು ಪ್ರಾಧಿಕಾರಿಯ ಅಧಿಕಾರ ವ್ಯಾಪ್ತಿಯ ಹೊರಗಡೆ ವರ್ಗಾವಣೆ ಮಾಡಿದರೆ, ಪ್ರತಿನಿಯೋಜನೆ ಮಾಡಿದರೆ ಅಥವಾ

ಅನ್ಯಥಾ ಸ್ಥಳ ನಿಯುಕ್ತಿ ಮಾಡಿದರೆ, ಅದೇ ಶಿಸ್ತು ಪ್ರಾಧಿಕಾರಿಯು ಈ ನಿಯಮಗಳ ಅನುಸಾರವಾಗಿ ಅಂಥ ಸರ್ಕಾರಿ ನೌಕರನ ವಿರುದ್ಧ ಆರೋಪ ವಿಷಯಗಳ ಬಗ್ಗೆ ವಿಚಾರಣೆಯನ್ನು ಮುಂದುವರೆಸತಕ್ಕದ್ದು ಮತ್ತು ಮುಕ್ತಾಯಗೊಳಿಸತಕ್ಕದ್ದು ಅಥವಾ ಮುಂದುವರೆಯುವಂತೆ ಅಥವಾ ಮುಕ್ತಾಯಗೊಳಿಸುವಂತೆ ಮಾಡತಕ್ಕದ್ದು ಮತ್ತು ಅಂಥ ಸರ್ಕಾರಿ ನೌಕರನ ಮೇಲೆ 8ನೇ ನಿಯಮದ (i)ರಿಂದ (ivಎ) ವರೆಗಿನ ಖಂಡಗಳಲ್ಲಿ ನಿರ್ದಿಷ್ಟಪಡಿಸಿದ ದಂಡನೆಗಳಲ್ಲಿ ಯಾವುದೇ ದಂಡನೆಯನ್ನು ವಿಧಿಸಲು ಅಧಿಕಾರ ಹೊಂದಿರತಕ್ಕದ್ದು:

ಪರಂತು, ಈ ಉಪನಿಯಮದ ಮೇರೆಗೆ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಯು ಹೊರಡಿಸಿದ ಆದೇಶದ ವಿರುದ್ಧ,–

(i) (2ಎ) ಉಪನಿಯಮದ (ii)ನೇ ಖಂಡದ (ಎ) ಉಪಖಂಡದಲ್ಲಿ ಉಲ್ಲೇಖಿಸಿದ ಸರ್ಕಾರಿ ನೌಕರನ ಸಂದರ್ಭದಲ್ಲಿ, ಅಂಥ ಸರ್ಕಾರಿ ನೌಕರನು ಯಾವ ಇಲಾಖೆಗೆ ಸೇರಿರುತ್ತಾನೋ ಆ ಇಲಾಖೆಯ ಮುಖ್ಯಸ್ಥರಿಗೆ;

(ii) (2ಎ) ಉಪನಿಯಮದ (ii)ನೇ ಖಂಡದ (ಬಿ) ಉಪಖಂಡದಲ್ಲಿ ಉಲ್ಲೇಖಿಸಿದ ವೈದ್ಯರ ಸಂದರ್ಭದಲ್ಲಿ, ಸರ್ಕಾರಕ್ಕೆ

– ಅಪೀಲನ್ನು ಸಲ್ಲಿಸಲು ಅವಕಾಶವಿರತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಎಲ್ ಜಯರಾಮ್**

ಸರ್ಕಾರದ ಅಧೀನ ಕಾರ್ಯದರ್ಶಿ–II

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ,

(ಸೇವಾ ನಿಯಮಗಳು).

**ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ**

**ಅಧಿಸೂಚನೆ**

ಸಂಖ್ಯೆ ಡಿಪಿಎಆರ್ 4 ಎಸ್‌ಡಿಇ 2000, ಬೆಂಗಳೂರು, ದಿನಾಂಕ 15ನೇ ಏಪ್ರಿಲ್, 2002.

ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು, 1957ನ್ನು ಮತ್ತಷ್ಟು ತಿದ್ದುಪಡಿ ಮಾಡಲು ಈ ಮುಂದಿನ ನಿಯಮಗಳ ಕರಡನ್ನು, ಅದರಿಂದ ಬಾಧಿತರಾಗುವ ಸಂಭವವಿರುವ ಎಲ್ಲಾ ವ್ಯಕ್ತಿಗಳಿಂದ, ಸರ್ಕಾರಿ ರಾಜ್ಯಪತ್ರದಲ್ಲಿ ಅದನ್ನು ಪ್ರಕಟಿಸಿದ ದಿನಾಂಕದಿಂದ ಮೂವತ್ತು ದಿನಗಳೊಳಗಾಗಿ ಆಕ್ಷೇಪಣೆಗಳನ್ನು ಮತ್ತು ಸಲಹೆಗಳನ್ನು ಆಹ್ವಾನಿಸಿ, ಕರ್ನಾಟಕ ರಾಜ್ಯ ಸಿವಿಲ್ ಸೇವಾ ಅಧಿನಿಯಮ, 1978 (ಕರ್ನಾಟಕ ಅಧಿನಿಯಮ 1990ರ 14)ರ 3ನೇ ಪ್ರಕರಣದ (2)ನೇ ಉಪಪ್ರಕರಣದ (ಎ) ಖಂಡದ ಮೂಲಕ ಅಗತ್ಯಪಡಿಸಲಾದಂತೆ, ದಿನಾಂಕ 15ನೇ ಫೆಬ್ರವರಿ, 2002ರ ಕರ್ನಾಟಕ ವಿಶೇಷ ರಾಜ್ಯಪತ್ರದ ಭಾಗ–IV, ವಿಭಾಗ 2(ಸಿ) (i) ರಲ್ಲಿ ಅಧಿಸೂಚನೆ ಸಂಖ್ಯೆ ಡಿಪಿಎಆರ್ 4 ಎಸ್‌ಡಿಇ 2000, ದಿನಾಂಕ 14ನೇ ಫೆಬ್ರವರಿ 2002 ರಲ್ಲಿ ಪ್ರಕಟಿಸಿರುವುದರಿಂದ;

ಸದರಿ ರಾಜ್ಯಪತ್ರವನ್ನು 2002ರ ಫೆಬ್ರವರಿ 15 ರಂದು ಸಾರ್ವಜನಿಕರಿಗೆ ಲಭ್ಯವಾಗುವಂತೆ ಮಾಡಿರುವುದರಿಂದ;

ಮತ್ತು, ಸದರಿ ಕರಡು ನಿಯಮಗಳ ಬಗ್ಗೆ ರಾಜ್ಯ ಸರ್ಕಾರಕ್ಕೆ ಯಾವ ಆಕ್ಷೇಪಣೆಗಳೂ ಮತ್ತು ಸಲಹೆಗಳೂ ಬಾರದಿರುವುದರಿಂದ;

ಈಗ ಕರ್ನಾಟಕ ರಾಜ್ಯ ಸಿವಿಲ್ ಸೇವಾ ಅಧಿನಿಯಮ, 1978 (ಕರ್ನಾಟಕ ಅಧಿನಿಯಮ 1990ರ 14)ರ 8ನೇ ಪ್ರಕರಣದೊಂದಿಗೆ ಓದಿಕೊಂಡ 3ನೇ ಪ್ರಕರಣದ (1)ನೇ ಉಪಪ್ರಕರಣದಿಂದ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಈ ಮೂಲಕ ಈ ಮುಂದಿನ ನಿಯಮಗಳನ್ನು ರಚಿಸುತ್ತದೆ, ಎಂದರೆ:–

**1. ಹೆಸರು ಮತ್ತು ಪ್ರಾರಂಭ.**– (1) ಈ ನಿಯಮಗಳನ್ನು ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು (ಆರನೇ ತಿದ್ದುಪಡಿ) ನಿಯಮಗಳು, 2001 ಎಂದು ಕರೆಯತಕ್ಕದ್ದು.

(2) ಅವು, ಸರ್ಕಾರಿ ರಾಜ್ಯಪತ್ರದಲ್ಲಿ ಅವುಗಳನ್ನು ಪ್ರಕಟಿಸಿದ ದಿನಾಂಕದಂದು ಜಾರಿಗೆ ಬರತಕ್ಕದ್ದು.

**2. 10ನೇ ನಿಯಮದ ತಿದ್ದುಪಡಿ.**– ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು, 1957ರ (ಇಲ್ಲಿ ಇನ್ನು ಮುಂದೆ ಸದರಿ ನಿಯಮಗಳೆಂದು ಉಲ್ಲೇಖಿಸಲಾಗಿದೆ) 10ನೇ ನಿಯಮದಲ್ಲಿ,–

(1) ಉಪನಿಯಮ (1)ರಲ್ಲಿ (ಎ) ಮತ್ತು (ಬಿ) ಖಂಡಗಳ ಬದಲಾಗಿ ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ;–

(ಎ) ಕಾನೂನುಸಮ್ಮತ ಸಂಭಾವನೆಯನ್ನು ಹೊರತುಪಡಿಸಿ, ಅವನು ಲಂಚವನ್ನು ಸ್ವೀಕರಿಸುವಾಗ ಭ್ರಷ್ಟಾಚಾರ ಪ್ರತಿಬಂಧ ಅಧಿನಿಯಮ, 1988ರ ಅಥವಾ ಯಾವುದೇ ಇತರೆ ಕಾನೂನಿನ ಮೇರೆಗಿನ ಉಪಬಂಧಗಳ ಅಡಿಯಲ್ಲಿ ತನಿಖೆ ನಡೆಸಲು ಅಧಿಕೃತರಾದ ವ್ಯಕ್ತಿಗಳು ಅವನು ಲಂಚವನ್ನು ಸ್ವೀಕರಿಸುತ್ತಿರುವಾಗಲೇ ಹಿಡಿದಿರುವುದನ್ನು ತೋರಿಸುವ ಮೇಲ್ನೋಟದ ಸಾಕ್ಷ್ಯವಿದ್ದಲ್ಲಿ;

(ಬಿ) ಅವನು ಕರ್ತವ್ಯ ನಿರ್ವಹಿಸುತ್ತಿರುವಾಗ ನೈತಿಕ ಅಧ:ಪತನವನ್ನು ಒಳಗೊಳ್ಳುವ ಯಾವುದೇ ಅಪರಾಧ ಮಾಡಿದ್ದಕ್ಕಾಗಿ ಅವನ ವಿರುದ್ಧ ಸಕ್ಷಮ ನ್ಯಾಯಾಲಯದ ಮುಂದೆ ಆರೋಪಪಟ್ಟಿ ಸಲ್ಲಿಸಿರುವಲ್ಲಿ; ಅಥವಾ

(ಸಿ) ಭ್ರಷ್ಟಾಚಾರದ, ಸರ್ಕಾರಿ ಹಣದ ಆಪರಾಧಿಕ ದುರ್ವಿನಿಯೋಗದ ಅಥವಾ ಆಪರಾಧಿಕ ದುರುಪಯೋಗದ ಆರೋಪಗಳ ಮೇಲೆ ಅವನ ವಿರುದ್ಧ ಸಕ್ಷಮ ನ್ಯಾಯಾಲಯದ ಮುಂದೆ ಆರೋಪ ಪಟ್ಟಿಯನ್ನು ಸಲ್ಲಿಸಿರುವಲ್ಲಿ;

(ಡಿ) ಅವನ ವಿರುದ್ಧ ತೀವ್ರ ಕರ್ತವ್ಯ ಲೋಪದ ಬಗ್ಗೆ ಮೇಲ್ನೋಟದ ಸಾಕ್ಷ್ಯವಿದ್ದಲ್ಲಿ;"

(2) (3)ನೇ ಉಪನಿಯಮದ ಬದಲಾಗಿ, ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

"(3) ಸರ್ಕಾರಿ ನೌಕರನನ್ನು ಅಮಾನತ್ತಿನಲ್ಲಿಡಲು ಸಕ್ಷಮನಾದ ಪ್ರಾಧಿಕಾರಿಯು, ಪ್ರಕರಣಕ್ಕೆ ಸಂಬಂಧಿಸಿದ ಸುಸಂಗತ ವಿಷಯ ಸಾಮಗ್ರಿಯನ್ನು ಪರಿಶೀಲಿಸತಕ್ಕದ್ದು ಮತ್ತು ಸರ್ಕಾರಿ ನೌಕರನ ವಿರುದ್ಧ ಮಾಡಿದ ಆರೋಪಗಳನ್ನು ಸಮರ್ಥಿಸುವ ಮೇಲ್ನೋಟದ ಸಾಕ್ಷ್ಯ ಇದೆಯೇ ಎಂಬುದನ್ನು ಪರಿಶೀಲಿಸತಕ್ಕದ್ದು ಮತ್ತು ಹಾಗೆ ಪರಿಶೀಲಿಸಿದ ಮೇಲೆ ಮೇಲ್ನೋಟದ ಸಾಕ್ಷ್ಯ ಇದೆಯೆಂದು ತನಗೆ ಮನದಟ್ಟಾದರೆ, ಆ ಪ್ರಾಧಿಕಾರಿಯು ಸಂಬಂಧಪಟ್ಟ ಸರ್ಕಾರಿ ನೌಕರನನ್ನು ಅಮಾನತ್ತಿನಲ್ಲಿಡಬಹುದು."

(3) (4)ನೇ ಉಪನಿಯಮವನ್ನು ಬಿಟ್ಟುಬಿಡತಕ್ಕದ್ದು.

**3. 11ನೇ ನಿಯಮದ ತಿದ್ದುಪಡಿ.–** ಸದರಿ ನಿಯಮಗಳ 11ನೇ ನಿಯಮದಲ್ಲಿ,–

(1) (2)ನೇ ಉಪನಿಯಮದ ಪರಂತುಕವನ್ನು ಬಿಟ್ಟುಬಿಡತಕ್ಕದ್ದು;

(2) (6)ನೇ ಉಪನಿಯಮದ ಪರಂತುಕವನ್ನು ಬಿಟ್ಟುಬಿಡತಕ್ಕದ್ದು.

**4. ಬಾಕಿ ಪ್ರಕರಣಗಳ ವಿಲೆ.–** ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) (ತಿದ್ದುಪಡಿ) ನಿಯಮಗಳು, 2001ರ ಪ್ರಾರಂಭದ ದಿನಾಂಕದಂದು ಬಾಕಿಯಿದ್ದ ಯಾವುವೇ ವ್ಯವಹರಣೆಗಳನ್ನು, ಆ ವ್ಯವಹರಣೆಯು ಲೋಕಾಯುಕ್ತರ ಅಥವಾ ಉಪಲೋಕಾಯುಕ್ತರ ಅಥವಾ ಸಂದರ್ಭಾನುಸಾರ ಲೋಕಾಯುಕ್ತ ಅಧಿಕಾರಿಯ ಮುಂದೆ ಇದ್ದರೆ, ತಿದ್ದುಪಡಿಯನ್ನು ಮಾಡಿರದಿದ್ದರೆ ಹೇಗೋ ಹಾಗೆ ಅವರು ಮುಂದುವರೆಸತಕ್ಕದ್ದು ಮತ್ತು ಮುಕ್ತಾಯಗೊಳಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಎಲ್ ಜಯರಾಮ್**

ಸರ್ಕಾರದ ಅಧೀನ ಕಾರ್ಯದರ್ಶಿ–II

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ,

(ಸೇವಾ ನಿಯಮಗಳು).

**ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ**

**ಅಧಿಸೂಚನೆ**

ಸಂಖ್ಯೆ ಡಿಪಿಎಆರ್ 11 ಎಸ್‌ಡಿಇ 2002(1), ಬೆಂಗಳೂರು, ದಿನಾಂಕ 19ನೇ ಜೂನ್, 2002.

ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು, 1957ರ 10ನೇ ನಿಯಮದ (1)ನೇ ಉಪನಿಯಮದಿಂದ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು, ಈ ಮೂಲಕ.–

(ಎ) ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ಸೇವೆಗಳಿಗೆ ಸೇರಿದ (ಕಾಲಕಾಲಕ್ಕೆ ಪರಿಷ್ಕರಿಸಬಹುದಾದ) ರೂ. 10620–14960ರ ವರೆಗಿನ ಮತ್ತು ಅದನ್ನೂ ಒಳಗೊಂಡಿರುವ ವೇತನ ಶ್ರೇಣಿಯನ್ನು ಹೊಂದಿರುವ ಯಾರೇ ಸರ್ಕಾರಿ ನೌಕರನನ್ನು ಅಮಾನತ್ತಿನಲ್ಲಿಡಲು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ಆಯುಕ್ತರಿಗೆ ಅಧಿಕಾರ ನೀಡುತ್ತದೆ; ಮತ್ತು

(ಬಿ) ಈ ಮುಂದಿನ ಕೋಷ್ಟಕ I ರಲ್ಲಿ ಮತ್ತು ಕೋಷ್ಟಕ II ರಲ್ಲಿ ನಿರ್ದಿಷ್ಟಪಡಿಸಿರುವ ಅಧಿಕಾರಿಗಳಿಗೆ ಅವರವರ ಆಡಳಿತ ನಿಯಂತ್ರಣದಲ್ಲಿ ಕೆಲಸ ಮಾಡುತ್ತಿರುವ ಸಮೂಹ 'ಸಿ' ಮತ್ತು ಸಮೂಹ 'ಡಿ' ಹುದ್ದೆಗಳನ್ನು ಹೊಂದಿರುವ ಸರ್ಕಾರಿ ನೌಕರರನ್ನು ಅಮಾನತ್ತಿನಲ್ಲಿಡಲು ಅಧಿಕಾರ ನೀಡುತ್ತದೆ:–

**ಕೋಷ್ಟಕ–1**

**ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ಇಲಾಖೆ**

| | |
|---|---|
| 1) | ಮುಖ್ಯ ಆಡಳಿತಾಧಿಕಾರಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯ |
| 2) | ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿ |
| 3) | ಜಿಲ್ಲಾ ಸರ್ಜನ್ |
| 4) | ಪ್ರಾಂಶುಪಾಲರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ತರಬೇತಿ ಕೇಂದ್ರ |
| 5) | ಪ್ರಾಂಶುಪಾಲರು, ಜಿಲ್ಲಾ ತರಬೇತಿ ಕೇಂದ್ರ |
| 6) | ಅಧೀಕ್ಷಕರು, ಕೆ.ಸಿ. ಜನರಲ್ ಆಸ್ಪತ್ರೆ, ಬೆಂಗಳೂರು |
| 7) | ಅಧೀಕ್ಷಕರು, ಜಯನಗರ ಜನರಲ್ ಆಸ್ಪತ್ರೆ, ಬೆಂಗಳೂರು |
| 8) | ಅಧೀಕ್ಷಕರು, ಎದೆ ಮತ್ತು ಕ್ಷಯರೋಗ ಆಸ್ಪತ್ರೆ, ಬೆಂಗಳೂರು |
| 9) | ಅಧೀಕ್ಷಕರು, ಐಐಎಸ್‌ಐಎಸ್ ಗೋಷಿಯ ಆಸ್ಪತ್ರೆ, ಬೆಂಗಳೂರು |
| 10) | ಜಿಲ್ಲೆಯ ಅಧಿಕಾರಿ |

**ಕೋಷ್ಟಕ–II**

**ವೈದ್ಯಕೀಯ ಶಿಕ್ಷಣ ಇಲಾಖೆ**

| | |
|---|---|
| 1) | ಮುಖ್ಯ ಆಡಳಿತಾಧಿಕಾರಿ, ವೈದ್ಯಕೀಯ ಶಿಕ್ಷಣ ನಿರ್ದೇಶನಾಲಯ |
| 2) | ಅಧೀಕ್ಷಕರು, ಬೌರಿಂಗ್ ಮತ್ತು ಲೇಡಿಕರ್ಜನ್ ಆಸ್ಪತ್ರೆ, ಬೆಂಗಳೂರು |
| 3) | ಅಧೀಕ್ಷಕರು, ವಿಕ್ಟೋರಿಯಾ ಆಸ್ಪತ್ರೆ, ಬೆಂಗಳೂರು |
| 4) | ಅಧೀಕ್ಷಕರು, ವಾಣಿವಿಲಾಸ ಆಸ್ಪತ್ರೆ, ಬೆಂಗಳೂರು |
| 5) | ಅಧೀಕ್ಷಕರು, ಮಿಂಟೋ ಆಸ್ಪತ್ರೆ, ಬೆಂಗಳೂರು |
| 6) | ಪ್ರಾಂಶುಪಾಲರು, ಸರ್ಕಾರಿ ದಂತ ವೈದ್ಯಕೀಯ ಕಾಲೇಜು, ಬೆಂಗಳೂರು |
| 7) | ಪ್ರಾಂಶುಪಾಲರು, ಬೆಂಗಳೂರು ವೈದ್ಯಕೀಯ ಕಾಲೇಜು, ಬೆಂಗಳೂರು |
| 8) | ಅಧೀಕ್ಷಕರು, ಕೆ.ಆರ್. ಆಸ್ಪತ್ರೆ, ಮೈಸೂರು |
| 9) | ಅಧೀಕ್ಷಕರು, ಚೆಲುವಾಂಬ ಆಸ್ಪತ್ರೆ, ಮೈಸೂರು |
| 10) | ಅಧೀಕ್ಷಕರು, ಪಿ.ಕೆ.ಟಿ.ಬಿ. ಆಸ್ಪತ್ರೆ, ಮೈಸೂರು |
| 11) | ಅಧೀಕ್ಷಕರು, ಸಿ.ಜಿ. ಆಸ್ಪತ್ರೆ, ದಾವಣಗೆರೆ |
| 12) | ಅಧೀಕ್ಷಕರು, ಮಹಿಳಾ ಮತ್ತು ಮಕ್ಕಳ ಆಸ್ಪತ್ರೆ, ದಾವಣಗೆರೆ |
| 13) | ಅಧೀಕ್ಷಕರು, ಸರ್ಕಾರಿ ವೆನ್‌ಲಾಕ್ ಆಸ್ಪತ್ರೆ, ಮಂಗಳೂರು |
| 14) | ಅಧೀಕ್ಷಕರು, ಲೇಡಿಗೋಷನ್ ಆಸ್ಪತ್ರೆ, ಮಂಗಳೂರು |
| 15) | ಅಧೀಕ್ಷಕರು, ಮಾನಸಿಕ ಆರೋಗ್ಯ ಆಸ್ಪತ್ರೆ, ಧಾರವಾಡ |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಎಲ್ ಜಯರಾಮ್**

ಸರ್ಕಾರದ ಅಧೀನ ಕಾರ್ಯದರ್ಶಿ–II

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ,

(ಸೇವಾ ನಿಯಮಗಳು).

**ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ**

**ಅಧಿಸೂಚನೆ**

ಸಂಖ್ಯೆ ಡಿಪಿಎಆರ್ 11 ಎಸ್‌ಡಿಇ 2002 (II), ಬೆಂಗಳೂರು, ದಿನಾಂಕ 9ನೇ ಆಗಸ್ಟ್, 2002

ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು, 1957ನ್ನು ಮತ್ತಷ್ಟು ತಿದ್ದುಪಡಿ ಮಾಡಲು ಈ ಮುಂದಿನ ನಿಯಮಗಳ ಕರಡನ್ನು, ಅದರಿಂದ ಬಾಧಿತರಾಗುವ ಸಂಭವವಿರುವ ಎಲ್ಲಾ ವ್ಯಕ್ತಿಗಳಿಂದ, ಸರ್ಕಾರಿ ರಾಜ್ಯಪತ್ರದಲ್ಲಿ ಅದನ್ನು ಪ್ರಕಟಿಸಿದ ದಿನಾಂಕದಿಂದ 30 ದಿನಗಳೊಳಗಾಗಿ ಆಕ್ಷೇಪಣೆಗಳನ್ನು ಮತ್ತು ಸಲಹೆಗಳನ್ನು ಆಹ್ವಾನಿಸಿ, ಕರ್ನಾಟಕ ರಾಜ್ಯ ಸಿವಿಲ್ ಸೇವಾ ಅಧಿನಿಯಮ, 1978 (ಕರ್ನಾಟಕ ಅಧಿನಿಯಮ 1990ರ 14)ರ 3ನೇ ಪ್ರಕರಣದ (2)ನೇ ಉಪಪ್ರಕರಣದ (ಎ) ಖಂಡದ ಮೂಲಕ ಅಗತ್ಯಪಡಿಸಲಾದಂತೆ, ದಿನಾಂಕ 19ನೇ ಜೂನ್ 2002ರ ಕರ್ನಾಟಕ ವಿಶೇಷ ರಾಜ್ಯಪತ್ರದ ಭಾಗ–IVಎ (ಪಿ.ಆರ್. ಸಂ. 902) ರಲ್ಲಿ ಅಧಿಸೂಚನೆ ಸಂಖ್ಯೆ ಡಿಪಿಎಆರ್ 11 ಎಸ್‌ಡಿಇ 2002, ದಿನಾಂಕ 19ನೇ ಜೂನ್ 2002 ರಲ್ಲಿ ಪ್ರಕಟಿಸಿರುವುದರಿಂದ;

ಸದರಿ ರಾಜ್ಯಪತ್ರವನ್ನು 2002ರ ಜೂನ್ 19ರಂದು ಸಾರ್ವಜನಿಕರಿಗೆ ಲಭ್ಯವಾಗುವಂತೆ ಮಾಡಿರುವುದರಿಂದ;

ಮತ್ತು, ಸದರಿ ಕರಡು ನಿಯಮಗಳ ಬಗ್ಗೆ ರಾಜ್ಯ ಸರ್ಕಾರಕ್ಕೆ ಯಾವ ಆಕ್ಷೇಪಣೆಗಳೂ ಮತ್ತು ಸಲಹೆಗಳೂ ಬಾರದಿರುವುದರಿಂದ;

ಈಗ ಕರ್ನಾಟಕ ರಾಜ್ಯ ಸಿವಿಲ್ ಸೇವಾ ಅಧಿನಿಯಮ, 1978 (ಕರ್ನಾಟಕ ಅಧಿನಿಯಮ 1990ರ 14)ರ 8ನೇ ಪ್ರಕರಣದೊಂದಿಗೆ ಓದಿಕೊಂಡ 3ನೇ ಪ್ರಕರಣದ (1)ನೇ ಉಪಪ್ರಕರಣದಿಂದ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಈ ಮೂಲಕ ಈ ಮುಂದಿನ ನಿಯಮಗಳನ್ನು ರಚಿಸುತ್ತದೆ, ಎಂದರೆ:–

**1. ಹೆಸರು ಮತ್ತು ಪ್ರಾರಂಭ.–** (1) ಈ ನಿಯಮಗಳನ್ನು ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) (ಏಳನೇ ತಿದ್ದುಪಡಿ) ನಿಯಮಗಳು, 2002 ಎಂದು ಕರೆಯತಕ್ಕದ್ದು.

(2) ಅವು, ಸರ್ಕಾರಿ ರಾಜ್ಯಪತ್ರದಲ್ಲಿ ಅವುಗಳನ್ನು ಪ್ರಕಟಿಸಿದ ದಿನಾಂಕದಂದು ಜಾರಿಗೆ ಬರತಕ್ಕದ್ದು.

**2. 9ನೇ ನಿಯಮದ ತಿದ್ದುಪಡಿ.–** ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು, 1957ರ 9ನೇ ನಿಯಮದಲ್ಲಿ, (ಬಿಬಿಬಿ) ಖಂಡದ ನಂತರ, ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

"(ಬಿಬಿಬಿ–1) ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳಿಗೆ ಸೇರಿದ (9580–14200 ರೂ.ಗಳ) (ಕಾಲಕಾಲಕ್ಕೆ ಪರಿಷ್ಕೃತವಾಗಬಹುದಾದ) ವೇತನ ಶ್ರೇಣಿಯಲ್ಲಿರುವ ಜಂಟಿ ನಿರ್ದೇಶಕರ ಹಂತದವರೆಗೆ ಮತ್ತು ಅದನ್ನು ಒಳಗೊಂಡಂತೆ ಯಾರೇ ಸರ್ಕಾರಿ ನೌಕರನ ಮೇಲೆ 8ನೇ ನಿಯಮದ (ii), (iii), (iiiಎ), (iv) ಮತ್ತು (ivಎ) ಖಂಡಗಳಲ್ಲಿ ನಿರ್ದಿಷ್ಟಪಡಿಸಿದ ದಂಡನೆಗಳಲ್ಲಿ ಯಾವುದೇ ದಂಡನೆಯನ್ನು ವಿಧಿಸಬಹುದು;

(ಬಿಬಿಬಿ–2) ವೈದ್ಯಕೀಯ ಶಿಕ್ಷಣ ನಿರ್ದೇಶಕರ ಕಚೇರಿಯ ಮುಖ್ಯ ಆಡಳಿತಾಧಿಕಾರಿಯವರು, ವೈದ್ಯಕೀಯ ಶಿಕ್ಷಣ ನಿರ್ದೇಶಕರ ಕಚೇರಿಯಲ್ಲಿ ಕೆಲಸ ಮಾಡುತ್ತಿರುವ ವೈದ್ಯಕೀಯ ಶಿಕ್ಷಣ ಸೇವೆಗಳ ಸಮೂಹ 'ಸಿ' ಮತ್ತು 'ಡಿ' ಕೇಡರ್‌ಗಳಿಗೆ ಸೇರಿದ ಯಾರೇ ಸರ್ಕಾರಿ ನೌಕರನ ಮೇಲೆ 8ನೇ ನಿಯಮದ (i) ರಿಂದ (ivಎ) ವರೆಗಿನ ಖಂಡಗಳಲ್ಲಿ ನಿರ್ದಿಷ್ಟಪಡಿಸಿದ ದಂಡನೆಗಳಲ್ಲಿ ಯಾವುದೇ ದಂಡನೆಯನ್ನು ವಿಧಿಸಬಹುದು;

(ಬಿಬಿಬಿ–3) ಜಿಲ್ಲೆಯ ಅಧಿಕಾರಿಗಳು, ಸಂಸ್ಥೆಗಳ ಮುಖ್ಯಸ್ಥರು, ಆಸ್ಪತ್ರೆಗಳ ಅಧೀಕ್ಷಕರು, ಕಚೇರಿ ಮುಖ್ಯಸ್ಥರು, ಪ್ರಾಂಶುಪಾಲರು, ಜಿಲ್ಲಾ ವೈದ್ಯಾಧಿಕಾರಿಗಳು, ಸಿವಿಲ್ ಸರ್ಜನ್‌ಗಳು, ವೈದ್ಯಕೀಯ ಶಿಕ್ಷಣ ನಿರ್ದೇಶಕರ ಕಚೇರಿಯಿಂದ ಹೊರಗಿರುವ ಕಚೇರಿಗಳಲ್ಲಿ, ಸಂಸ್ಥೆಗಳಲ್ಲಿ ಅಥವಾ ಆಸ್ಪತ್ರೆಗಳಲ್ಲಿ ತಮ್ಮ ಆಡಳಿತ ನಿಯಂತ್ರಣದಲ್ಲಿ ಕೆಲಸ ಮಾಡುತ್ತಿರುವ ವೈದ್ಯಕೀಯ ಶಿಕ್ಷಣ ಸೇವೆಗಳ ಸಮೂಹ 'ಸಿ' ಮತ್ತು 'ಡಿ' ಕೇಡರ್‌ಗಳಿಗೆ ಸೇರಿದ ಯಾರೇ ಸರ್ಕಾರಿ ನೌಕರರ ಮೇಲೆ 8ನೇ ನಿಯಮದ (i) ರಿಂದ (ivಎ) ವರೆಗಿನ ಖಂಡಗಳಲ್ಲಿ ನಿರ್ದಿಷ್ಟಪಡಿಸಿದ ದಂಡನೆಗಳಲ್ಲಿ ಯಾವುದೇ ದಂಡನೆಯನ್ನು ವಿಧಿಸಬಹುದು;

**ವಿವರಣೆ.–** ಜಿಲ್ಲೆಯ ಅಧಿಕಾರಿಗಳಲ್ಲಿ, ಬೌರಿಂಗ್ ಮತ್ತು ಲೇಡಿ ಕರ್ಜನ್ ಆಸ್ಪತ್ರೆಯ, ವಿಕ್ಟೋರಿಯಾ ಆಸ್ಪತ್ರೆಯ, ವಾಣಿ ವಿಲಾಸ ಆಸ್ಪತ್ರೆಯ ಮತ್ತು ಮಿಂಟೋ ಆಸ್ಪತ್ರೆಯ ಅಧೀಕ್ಷಕರು, ಸರ್ಕಾರಿ ದಂತ ವೈದ್ಯಕೀಯ ಕಾಲೇಜಿನ ಮತ್ತು ಬೆಂಗಳೂರು ವೈದ್ಯಕೀಯ ಕಾಲೇಜಿನ ಪ್ರಾಂಶುಪಾಲರು, ಮೈಸೂರು ಕೆ.ಆರ್. ಆಸ್ಪತ್ರೆಯ, ಮೈಸೂರು ಚೆಲುವಾಂಬ ಆಸ್ಪತ್ರೆಯ, ಮೈಸೂರು ಪಿಕೆಟಿಬಿ ಆಸ್ಪತ್ರೆಯ, ದಾವಣಗೆರೆ ಸಿಜಿ ಆಸ್ಪತ್ರೆಯ, ದಾವಣಗೆರೆ ಮಹಿಳಾ ಮತ್ತು ಮಕ್ಕಳ ಆಸ್ಪತ್ರೆಯ, ಮಂಗಳೂರು ಸರ್ಕಾರಿ ವೆನ್‌ಲಾಕ್ ಆಸ್ಪತ್ರೆಯ, ಮಂಗಳೂರಿನ ಲೇಡಿ ಗೋಷನ್ ಆಸ್ಪತ್ರೆಯ ಅಧೀಕ್ಷಕರು ಮತ್ತು ಧಾರವಾಡದ ಮಾನಸಿಕ ಆರೋಗ್ಯ ಆಸ್ಪತ್ರೆಯ ಅಧೀಕ್ಷಕರೂ ಸೇರುತ್ತಾರೆ.

(ಬಿಬಿಬಿ–4) ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶಕರ ಕಚೇರಿಯ ಮುಖ್ಯ ಆಡಳಿತಾಧಿಕಾರಿಯವರು ನಿರ್ದೇಶಕರ ಕಚೇರಿಯಲ್ಲಿ ತಮ್ಮ ಆಡಳಿತ ನಿಯಂತ್ರಣಲ್ಲಿ ಕೆಲಸ ಮಾಡುತ್ತಿರುವ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗೆ ಅಥವಾ ಸಾರ್ವಜನಿಕ ಆರೋಗ್ಯ ಸೇವೆಯ ಸಮೂಹ ಸಿ ಮತ್ತು ಡಿ ಕೇಡರ್‌ಗಳಿಗೆ ಸೇರಿದ ಯಾರೇ ಸರ್ಕಾರಿ ನೌಕರರ ಮೇಲೆ 8ನೇ ನಿಯಮದ (i) ರಿಂದ (ivಎ) ವರೆಗಿನ ಖಂಡಗಳಲ್ಲಿ ನಿರ್ದಿಷ್ಟಪಡಿಸಿದ ದಂಡನೆಗಳಲ್ಲಿ ಯಾವುದೇ ದಂಡನೆಯನ್ನು ವಿಧಿಸಬಹುದು;

(ಬಿಬಿಬಿ–5)ಜಿಲ್ಲೆಯ ಅಧಿಕಾರಿಗಳು, ಸಂಸ್ಥೆಗಳ ಮುಖ್ಯಸ್ಥರು, ಆಸ್ಪತ್ರೆಗಳ ಅಧೀಕ್ಷಕರು, ಕಚೇರಿಗಳ ಮುಖ್ಯಸ್ಥರು, ಪ್ರಾಂಶುಪಾಲರು, ಜಿಲ್ಲಾ ವೈದ್ಯಾಧಿಕಾರಿಗಳು, ಸಿವಿಲ್ ಸರ್ಜನ್ನರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ಅಥವಾ ಸಾರ್ವಜನಿಕ ಆರೋಗ್ಯ ಸೇವೆಗಳ ಸಮೂಹ 'ಸಿ' ಮತ್ತು 'ಡಿ' ಕೇಡರ್‌ಗಳಿಗೆ ಸೇರಿದ ಮತ್ತು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶಕರ ಕಚೇರಿಯ ಹೊರಗಿನ ಕಚೇರಿಗಳಲ್ಲಿ ತಮ್ಮ ಆಡಳಿತ ನಿಯಂತ್ರಣದಲ್ಲಿ ಕೆಲಸ ಮಾಡುತ್ತಿರುವ ಯಾರೇ ಸರ್ಕಾರಿ ನೌಕರರ ಮೇಲೆ 8ನೇ ನಿಯಮದ (i)ರಿಂದ (ivಎ) ವರೆಗಿನ ಖಂಡಗಳಲ್ಲಿ ನಿರ್ದಿಷ್ಟಪಡಿಸಿದ ದಂಡನೆಗಳಲ್ಲಿ ಯಾವುದೇ ದಂಡನೆಯನ್ನು ವಿಧಿಸಬಹುದು.

**ವಿವರಣೆ.–** ಜಿಲ್ಲೆಯ ಅಧಿಕಾರಿಗಳು ಎಂಬುದು, ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿ, ಜಿಲ್ಲಾ ಸರ್ಜನ್, ಎಚ್‌ಎಫ್‌ಡಬ್ಲ್ಯೂಟಿಸಿ ಪ್ರಾಂಶುಪಾಲರು, ಡಿಟಿಸಿ ಪ್ರಾಂಶುಪಾಲರು, ಕೆಸಿಜಿ ಆಸ್ಪತ್ರೆಯ ಅಧೀಕ್ಷಕರು, ಜಯನಗರ ಜನರಲ್ ಆಸ್ಪತ್ರೆಯ ಅಧೀಕ್ಷಕರು, ಹೆಚ್‌ಎಸ್‌ಐಎಸ್ ಗೌಷಿಯಾ ಆಸ್ಪತ್ರೆಯ ಅಧೀಕ್ಷಕರು, ಎದೆರೋಗ ಮತ್ತು ಕ್ಷಯ ರೋಗ ಆಸ್ಪತ್ರೆಯ ಅಧೀಕ್ಷಕರು ಇವರನ್ನು ಒಳಗೊಳ್ಳತಕ್ಕದ್ದು."

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಎಲ್ ಜಯರಾಮ್**

ಸರ್ಕಾರದ ಅಧೀನ ಕಾರ್ಯದರ್ಶಿ–II

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ, (ಸೇವಾ ನಿಯಮಗಳು).

**ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ**

**ಅಧಿಸೂಚನೆ**

ಸಂಖ್ಯೆ ಡಿಪಿಎಆರ್ 13 ಎಸ್‌ಡಿಇ 2002, ಬೆಂಗಳೂರು, ದಿನಾಂಕ 29ನೇ ಜುಲೈ, 2002

ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು, 1957ನ್ನು ಮತ್ತಷ್ಟು ತಿದ್ದುಪಡಿ ಮಾಡಲು ಈ ಮುಂದಿನ ನಿಯಮಗಳ ಕರಡನ್ನು, ಅದರಿಂದ ಬಾಧಿತರಾಗುವ ಸಂಭವವಿರುವ ಎಲ್ಲಾ ವ್ಯಕ್ತಿಗಳಿಂದ, ಸರ್ಕಾರಿ ರಾಜ್ಯಪತ್ರದಲ್ಲಿ ಅದನ್ನು ಪ್ರಕಟಿಸಿದ ದಿನಾಂಕದಿಂದ 30 ದಿನಗಳೊಳಗಾಗಿ ಆಕ್ಷೇಪಣೆಗಳನ್ನು ಮತ್ತು ಸಲಹೆಗಳನ್ನು ಆಹ್ವಾನಿಸಿ, ಕರ್ನಾಟಕ ರಾಜ್ಯ ಸಿವಿಲ್ ಸೇವಾ ಅಧಿನಿಯಮ, 1978 (ಕರ್ನಾಟಕ ಅಧಿನಿಯಮ 1990ರ 14)ರ 3ನೇ ಪ್ರಕರಣದ (2)ನೇ ಉಪಪ್ರಕರಣದ (ಎ) ಖಂಡದ ಮೂಲಕ ಅಗತ್ಯಪಡಿಸಲಾದಂತೆ, ದಿನಾಂಕ 25ನೇ ಜೂನ್, 2002ರ ಕರ್ನಾಟಕ ವಿಶೇಷ ರಾಜ್ಯಪತ್ರದ ಭಾಗ–IV–ಎ, (ಸಂ. 940) ರಲ್ಲಿ ಅಧಿಸೂಚನೆ ಸಂಖ್ಯೆ ಡಿಪಿಎಆರ್ 13 ಎಸ್‌ಡಿಇ 2002, ದಿನಾಂಕ 21ನೇ ಜೂನ್, 2002 ರಲ್ಲಿ ಪ್ರಕಟಿಸಿರುವುದರಿಂದ;

ಸದರಿ ರಾಜ್ಯಪತ್ರವನ್ನು 2002ರ ಜೂನ್ 25 ರಂದು ಸಾರ್ವಜನಿಕರಿಗೆ ಲಭ್ಯವಾಗುವಂತೆ ಮಾಡಿರುವುದರಿಂದ;

ಮತ್ತು, ಸದರಿ ಕರಡು ನಿಯಮಗಳ ಬಗ್ಗೆ ರಾಜ್ಯ ಸರ್ಕಾರಕ್ಕೆ ಯಾವ ಆಕ್ಷೇಪಣೆಗಳೂ ಮತ್ತು ಸಲಹೆಗಳೂ ಬಾರದಿರುವುದರಿಂದ;

ಈಗ ಕರ್ನಾಟಕ ರಾಜ್ಯ ಸಿವಿಲ್ ಸೇವಾ ಅಧಿನಿಯಮ, 1973 (ಕರ್ನಾಟಕ ಅಧಿನಿಯಮ 1990ರ 14)ರ 8ನೇ ಪ್ರಕರಣದೊಂದಿಗೆ ಓದಿಕೊಂಡ 3ನೇ ಪ್ರಕರಣದ (1)ನೇ ಉಪಪ್ರಕರಣದಿಂದ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಈ ಮೂಲಕ ಈ ಮುಂದಿನ ನಿಯಮಗಳನ್ನು ರಚಿಸುತ್ತದೆ, ಎಂದರೆ:–

**1. ಹೆಸರು ಮತ್ತು ಪ್ರಾರಂಭ.–** (1) ಈ ನಿಯಮಗಳನ್ನು ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) (ಎಂಟನೇ ತಿದ್ದುಪಡಿ) ನಿಯಮಗಳು, 2002 ಎಂದು ಕರೆಯತಕ್ಕದ್ದು.

(2) ಅವು, ಸರ್ಕಾರಿ ರಾಜ್ಯಪತ್ರದಲ್ಲಿ ಅವುಗಳನ್ನು ಪ್ರಕಟಿಸಿದ ದಿನಾಂಕದಂದು ಜಾರಿಗೆ ಬರತಕ್ಕದ್ದು.

**2. IIನೇ ಅನುಸೂಚಿಯ ತಿದ್ದುಪಡಿ.–** ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು, 1957ರ (ಇಲ್ಲಿ ಇನ್ನು ಮುಂದೆ ಸದರಿ ನಿಯಮಗಳೆಂದು ಉಲ್ಲೇಖಿಸಲಾಗಿದೆ) ಅನುಸೂಚಿ–II ರಲ್ಲಿ "ಸಾರ್ವಜನಿಕ ಶಿಕ್ಷಣ ಇಲಾಖೆ" ಎಂಬ ಶೀರ್ಷಿಕೆಯ ಅಡಿಯಲ್ಲಿ ಇರುವ ನಮೂದುಗಳ ಬದಲಾಗಿ ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

**ಸಾರ್ವಜನಿಕ ಶಿಕ್ಷಣ ಇಲಾಖೆ**

| | | | | |
|---|---|---|---|---|
| **"ಬೋಧಕ ಕೇಡರಿನ ಹುದ್ದೆಗಳು**<br>ಪ್ರೌಢಶಾಲಾ ಸಹಾಯಕ ದರ್ಜೆ I ಮತ್ತು ದರ್ಜೆ II, ಶಿಕ್ಷಣ ಸಹಾಯಕ, ಸರ್ಕಾರಿ ಶಿಕ್ಷಕರ ತರಬೇತಿ ಸಂಸ್ಥೆಯಲ್ಲಿರುವ ತರಬೇತಿ ಶಿಕ್ಷಕ, ಹಿಂದಿ ಶಿಕ್ಷಕ ಕಾಲೇಜಿನಲ್ಲಿರುವ ಸಹಾಯಕ ಉಪನ್ಯಾಸಕರು, ಸಂಸ್ಕೃತ ಶಾಲಾ ಪರಿವೀಕ್ಷಕರು, ದೈಹಿಕ ಶಿಕ್ಷಣ ಶಿಕ್ಷಕರು ಹಿರಿಯ ದರ್ಜೆ I ಮತ್ತು ದರ್ಜೆ II, ದೈಹಿಕ ಶಿಕ್ಷಣ ಶಿಕ್ಷಕರು ದರ್ಜೆ I ಮತ್ತು ದರ್ಜೆ II, ಸಂಗೀತ ಶಿಕ್ಷಕರು ದರ್ಜೆ I ಮತ್ತು II, ನಾಟಕ ಶಿಕ್ಷಕರು ದರ್ಜೆ I ಮತ್ತು ದರ್ಜೆ II, ನೃತ್ಯ ಶಿಕ್ಷಕರು ದರ್ಜೆ I ಮತ್ತು ದರ್ಜೆ II, ಕಲಾ ಶಿಕ್ಷಕರು, ಡ್ರಾಯಿಂಗ್ ಶಿಕ್ಷಕರು, ಕುಶಲ ಕಲಾ ಶಿಕ್ಷಕರು, ದರ್ಜೆ I ಮತ್ತು II, ಶಿಕ್ಷಣ ಸಂಯೋಜಕರು (ಸೆಕೆಂಡರಿ ಶಾಲೆ) | ಸಾರ್ವಜನಿಕ ಶಿಕ್ಷಣ ಉಪ ನಿರ್ದೇಶಕರು | ಕ್ಷೇತ್ರ ಶಿಕ್ಷಣಾಧಿಕಾರಿ | (ii) ರಿಂದ (ivಎ) | ಸಾರ್ವಜನಿಕ ಶಿಕ್ಷಣ ಉಪ–ನಿರ್ದೇಶಕರು. |
| | | ಸಾರ್ವಜನಿಕ ಶಿಕ್ಷಣ ಉಪ ನಿರ್ದೇಶಕರು | (v) ರಿಂದ (viii) | ಸಾರ್ವಜನಿಕ ಶಿಕ್ಷಣ ಜಂಟಿ ನಿರ್ದೇಶಕರು |
| ಮಾದರಿ ಹಿರಿಯ ಪ್ರಾಥಮಿಕ ಶಾಲೆಗಳಲ್ಲಿರುವ ಪದವೀಧರರಲ್ಲದ ಮುಖ್ಯೋಪಾಧ್ಯಾಯರು, ಹಿರಿಯ ಪ್ರಾಥಮಿಕ ಶಾಲಾ ಮುಖ್ಯೋಪಾಧ್ಯಾಯರು, ಪ್ರಾಥಮಿಕ ಶಾಲೆಗಳಲ್ಲಿರುವ ಸಹಾಯಕ ಶಿಕ್ಷಕರು, ಪ್ರಾಥಮಿಕ ಶಾಲೆಗಳಲ್ಲಿರುವ ಸಂಗೀತ ಶಿಕ್ಷಕರು, ಪ್ರಾಥಮಿಕ ಶಾಲೆಗಳಲ್ಲಿರುವ ಡ್ರಾಯಿಂಗ್ ಶಿಕ್ಷಕರು, ಪ್ರಾಥಮಿಕ ಶಾಲೆಗಳಲ್ಲಿರುವ ದೈಹಿಕ ಶಿಕ್ಷಣ ಶಿಕ್ಷಕರು, ಶಿಕ್ಷಣ ಸಂಯೋಜಕರು (ಪ್ರಾಥಮಿಕ ಶಾಲೆ) | ಕ್ಷೇತ್ರ ಶಿಕ್ಷಣಾಧಿಕಾರಿ | ಕ್ಷೇತ್ರ ಶಿಕ್ಷಣಾಧಿಕಾರಿ | (ii) ರಿಂದ (viii) | ಸಾರ್ವಜನಿಕ ಶಿಕ್ಷಣ ಉಪ ನಿರ್ದೇಶಕರು |

**ಸಾರ್ವಜನಿಕ ಶಿಕ್ಷಣ ಆಯುಕ್ತರ ಕಚೇರಿ, ಬೆಂಗಳೂರು**

| | | | | |
|---|---|---|---|---|
| ಸಾರ್ವಜನಿಕ ಶಿಕ್ಷಣ ಆಯುಕ್ತರ ಕಚೇರಿಯಲ್ಲಿರುವ ಲೆಕ್ಕಪತ್ರಗಳ ಅಧೀಕ್ಷಕರು, ಅಧೀಕ್ಷಕ | ಸಾರ್ವಜನಿಕ ಶಿಕ್ಷಣ ಆಯುಕ್ತರು | ಸಾರ್ವಜನಿಕ ಶಿಕ್ಷಣ ಜಂಟಿ ನಿರ್ದೇಶಕರು (ಆಡಳಿತ) | (ii) ರಿಂದ (ivಎ) | ಸಾರ್ವಜನಿಕ ಶಿಕ್ಷಣ ಆಯುಕ್ತರು |
| | | ಸಾರ್ವಜನಿಕ ಶಿಕ್ಷಣ ಆಯುಕ್ತರು | (v) ರಿಂದ (viii) | ಸರ್ಕಾರ |
| ಸಾರ್ವಜನಿಕ ಶಿಕ್ಷಣ ಆಯುಕ್ತರ ಕಚೇರಿಯಲ್ಲಿನ ಎಎಸ್ಓ, ಲೆಕ್ಕಪತ್ರಗಳ ಅಧೀಕ್ಷಕ | ಸಾರ್ವಜನಿಕ ಶಿಕ್ಷಣ ಆಯುಕ್ತರು | ಸಾರ್ವಜನಿಕ ಶಿಕ್ಷಣ ಜಂಟಿ ನಿರ್ದೇಶಕರು | (ii) ರಿಂದ (ivಎ) | ಸಾರ್ವಜನಿಕ ಶಿಕ್ಷಣ ಆಯುಕ್ತರು |
| | | ಸಾರ್ವಜನಿಕ ಶಿಕ್ಷಣ ಆಯುಕ್ತರು | (v) ರಿಂದ (viii) | ಸರ್ಕಾರ |

| | | | | |
|---|---|---|---|---|
| ಪ್ರಥಮ ದರ್ಜೆ ಸಹಾಯಕರು, ಶೀಘ್ರಲಿಪಿಗಾರ | ಸಾರ್ವಜನಿಕ ಶಿಕ್ಷಣ ಆಯುಕ್ತರು | ಸಾರ್ವಜನಿಕ ಶಿಕ್ಷಣ ಜಂಟಿ ನಿರ್ದೇಶಕರು (ಆಡಳಿತ) | (ii) ರಿಂದ (ivಎ) | ಸಾರ್ವಜನಿಕ ಶಿಕ್ಷಣ ಆಯುಕ್ತರು |
| | | ಸಾರ್ವಜನಿಕ ಶಿಕ್ಷಣ ಆಯುಕ್ತರು | (v) ರಿಂದ (viii) | ಸರ್ಕಾರ |
| ದ್ವಿತೀಯ ದರ್ಜೆ ಸಹಾಯಕರು, ಬೆರಳಚ್ಚುಗಾರ, ಗುಮಾಸ್ತ–ಹಾಗೂ– ಬೆರಳಚ್ಚುಗಾರ | ಸಾರ್ವಜನಿಕ ಶಿಕ್ಷಣ ಆಯುಕ್ತರು | ಸಾರ್ವಜನಿಕ ಶಿಕ್ಷಣ ಹಿರಿಯ ಸಹಾಯಕ ನಿರ್ದೇಶಕರು (ಆಡಳಿತ) | (ii) ರಿಂದ (ivಎ) | ಸಾರ್ವಜನಿಕ ಶಿಕ್ಷಣ ಜಂಟಿ ನಿರ್ದೇಶಕರು |
| | | ಸಾರ್ವಜನಿಕ ಶಿಕ್ಷಣ ಆಯುಕ್ತರು | (v) ರಿಂದ (viii) | ಸರ್ಕಾರ |
| ವಾಹನ ಚಾಲಕರು | ಸಾರ್ವಜನಿಕ ಶಿಕ್ಷಣ ಜಂಟಿ ನಿರ್ದೇಶಕರು (ಆಡಳಿತ) | ಸಾರ್ವಜನಿಕ ಶಿಕ್ಷಣ ಹಿರಿಯ ಸಹಾಯಕ ನಿರ್ದೇಶಕರು (ಆಡಳಿತ) | (ii) ರಿಂದ (ivಎ) | ಸಾರ್ವಜನಿಕ ಶಿಕ್ಷಣ ಜಂಟಿ ನಿರ್ದೇಶಕರು (ಆಡಳಿತ) |
| | | ಸಾರ್ವಜನಿಕ ಶಿಕ್ಷಣ ಜಂಟಿ ನಿರ್ದೇಶಕರು (ಆಡಳಿತ) | (v) ರಿಂದ (viii) | ಸಾರ್ವಜನಿಕ ಶಿಕ್ಷಣ ಜಂಟಿ ನಿರ್ದೇಶಕರು |
| **ಶಾಲೆಯ ಮುಖ್ಯ ವೈದ್ಯಕೀಯ ಪರಿವೀಕ್ಷಕರ ಕಚೇರಿ, ಬೆಂಗಳೂರು** | | | | |
| ಪ್ರಥಮ ದರ್ಜೆ ಸಹಾಯಕ ಮತ್ತು ದ್ವಿತೀಯ ದರ್ಜೆ ಸಹಾಯಕ | ಸಾರ್ವಜನಿಕ ಶಿಕ್ಷಣ ಆಯುಕ್ತರು | ಸಾರ್ವಜನಿಕ ಶಿಕ್ಷಣ ಜಂಟಿ ನಿರ್ದೇಶಕರು (ಆಡಳಿತ) | (ii) ರಿಂದ (ivಎ) | ಸಾರ್ವಜನಿಕ ಶಿಕ್ಷಣ ಜಂಟಿ ನಿರ್ದೇಶಕರು (ಆಡಳಿತ) |
| | | ಸಾರ್ವಜನಿಕ ಶಿಕ್ಷಣ ಆಯುಕ್ತರು | (v) ರಿಂದ (viii) | ಸರ್ಕಾರ |
| **ಸಂಸ್ಕೃತ ಕಾಲೇಜುಗಳ ಕಚೇರಿ, ಮೈಸೂರು ಮತ್ತು ಬೆಂಗಳೂರು** | | | | |
| ಪ್ರಥಮ ದರ್ಜೆ ಸಹಾಯಕ | ಸಾರ್ವಜನಿಕ ಶಿಕ್ಷಣ ಆಯುಕ್ತರು | ಪ್ರಾಂಶುಪಾಲರು | (ii) ರಿಂದ (ivಎ) | ಸಾರ್ವಜನಿಕ ಶಿಕ್ಷಣ ವಿಭಾಗೀಯ ಜಂಟಿ ನಿರ್ದೇಶಕರು |
| | | ಸಾರ್ವಜನಿಕ ಶಿಕ್ಷಣ ಆಯುಕ್ತರು | (v) ರಿಂದ (viii) | ಸರ್ಕಾರ |
| ದ್ವಿತೀಯ ದರ್ಜೆ ಸಹಾಯಕ | ಸಾರ್ವಜನಿಕ ಶಿಕ್ಷಣ ಆಯುಕ್ತರು | ಪ್ರಾಂಶುಪಾಲರು | (ii) ರಿಂದ (ivಎ) | ಸಾರ್ವಜನಿಕ ಶಿಕ್ಷಣ ವಿಭಾಗೀಯ ಜಂಟಿ ನಿರ್ದೇಶಕರು |
| | | ಸಾರ್ವಜನಿಕ ಶಿಕ್ಷಣ ಆಯುಕ್ತರು | (v) ರಿಂದ (viii) | ಸರ್ಕಾರ |

| | | | | |
|---|---|---|---|---|
| ಸಾರ್ವಜನಿಕ ಶಿಕ್ಷಣ ನಿರ್ದೇಶಕರು (ಪರೀಕ್ಷೆಗಳು) ಅವರ ಕಚೇರಿ ಮತ್ತು ಸಾರ್ವಜನಿಕ ಶಿಕ್ಷಣ ನಿರ್ದೇಶಕರು (ಇತರ ಪರೀಕ್ಷೆಗಳು) ಅವರ ಕಚೇರಿ, ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಲಿ, ಬೆಂಗಳೂರು | | | | |
| ಅಧೀಕ್ಷಕ | ಸಾರ್ವಜನಿಕ ಶಿಕ್ಷಣ ಆಯುಕ್ತರು | ಕಾರ್ಯದರ್ಶಿ, ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಲಿ | (ii) ರಿಂದ (ivಎ) | ಸಾರ್ವಜನಿಕ ಶಿಕ್ಷಣ ನಿರ್ದೇಶಕರು |
| | | ಸಾರ್ವಜನಿಕ ಶಿಕ್ಷಣ ಆಯುಕ್ತರು | (v) ರಿಂದ (viii) | ಸರ್ಕಾರ |
| ಪ್ರಥಮ ದರ್ಜೆ ಸಹಾಯಕ ಮತ್ತು ಶೀಘ್ರಲಿಪಿಗಾರ | ಸಾರ್ವಜನಿಕ ಶಿಕ್ಷಣ ಆಯುಕ್ತರು | ಕಾರ್ಯದರ್ಶಿ, ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಲಿ | (ii) ರಿಂದ (ivಎ) | ಸಾರ್ವಜನಿಕ ಶಿಕ್ಷಣ ನಿರ್ದೇಶಕರು |
| | | ಸಾರ್ವಜನಿಕ ಶಿಕ್ಷಣ ಆಯುಕ್ತರು | (v) ರಿಂದ (viii) | ಸರ್ಕಾರ |
| ದ್ವಿತೀಯ ದರ್ಜೆ ಸಹಾಯಕ, ಬೆರಳಚ್ಚುಗಾರ, ಗುಮಾಸ್ತ–ಹಾಗೂ– ಬೆರಳಚ್ಚುಗಾರ | ಸಾರ್ವಜನಿಕ ಶಿಕ್ಷಣ ಆಯುಕ್ತರು | ಕಾರ್ಯದರ್ಶಿ, ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಲಿ | (ii) ರಿಂದ (ivಎ) | ಸಾರ್ವಜನಿಕ ಶಿಕ್ಷಣ ನಿರ್ದೇಶಕರು |
| | | ಸಾರ್ವಜನಿಕ ಶಿಕ್ಷಣ ಆಯುಕ್ತರು | (v) ರಿಂದ (viii) | ಸರ್ಕಾರ |
| ವಾಹನ ಚಾಲಕರು | ಸಾರ್ವಜನಿಕ ಶಿಕ್ಷಣ ಆಯುಕ್ತರು | ಕಾರ್ಯದರ್ಶಿ, ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಲಿ | (ii) ರಿಂದ (ivಎ) | ಸಾರ್ವಜನಿಕ ಶಿಕ್ಷಣ ನಿರ್ದೇಶಕರು |
| | | ಸಾರ್ವಜನಿಕ ಶಿಕ್ಷಣ ಆಯುಕ್ತರು | (v) ರಿಂದ (viii) | ಸರ್ಕಾರ |
| ಸಾರ್ವಜನಿಕ ಶಿಕ್ಷಣ ನಿರ್ದೇಶಕರು, ಉರ್ದು ಮತ್ತು ಇತರ ಅಲ್ಪಸಂಖ್ಯಾತ ಭಾಷೆಗಳು, ಬೆಂಗಳೂರು | | | | |
| ಅಧೀಕ್ಷಕ | ಸಾರ್ವಜನಿಕ ಶಿಕ್ಷಣ ಆಯುಕ್ತರು | ಸಾರ್ವಜನಿಕ ಶಿಕ್ಷಣ ನಿರ್ದೇಶಕರು (ಅಲ್ಪಸಂಖ್ಯಾತ ಭಾಷೆಗಳು) | (ii) ರಿಂದ (ivಎ) | ಸಾರ್ವಜನಿಕ ಶಿಕ್ಷಣ ಆಯುಕ್ತರು |
| | | ಸಾರ್ವಜನಿಕ ಶಿಕ್ಷಣ ಆಯುಕ್ತರು | (v) ರಿಂದ (viii) | ಸರ್ಕಾರ |
| ಪ್ರಥಮ ದರ್ಜೆ ಸಹಾಯಕ, ಶೀಘ್ರಲಿಪಿಗಾರ | ಸಾರ್ವಜನಿಕ ಶಿಕ್ಷಣ ಆಯುಕ್ತರು | ಸಾರ್ವಜನಿಕ ಶಿಕ್ಷಣ ನಿರ್ದೇಶಕರು, (ಅಲ್ಪಸಂಖ್ಯಾತ ಭಾಷೆಗಳು) | (ii) ರಿಂದ (ivಎ) | ಸಾರ್ವಜನಿಕ ಶಿಕ್ಷಣ ಆಯುಕ್ತರು |
| | | ಸಾರ್ವಜನಿಕ ಶಿಕ್ಷಣ ಆಯುಕ್ತರು | (v) ರಿಂದ (viii) | ಸರ್ಕಾರ |
| ದ್ವಿತೀಯ ದರ್ಜೆ ಸಹಾಯಕ, ಬೆರಳಚ್ಚುಗಾರ, ಗುಮಾಸ್ತ–ಹಾಗೂ– ಬೆರಳಚ್ಚುಗಾರ | ಸಾರ್ವಜನಿಕ ಶಿಕ್ಷಣ ಆಯುಕ್ತರು | ಸಾರ್ವಜನಿಕ ಶಿಕ್ಷಣ ಉಪ ನಿರ್ದೇಶಕರು, (ಅಲ್ಪಸಂಖ್ಯಾತ ಭಾಷೆಗಳು) | (ii) ರಿಂದ (ivಎ) | ಸಾರ್ವಜನಿಕ ಶಿಕ್ಷಣ ಆಯುಕ್ತರು |

| | | | | |
|---|---|---|---|---|
| | | ಸಾರ್ವಜನಿಕ ಶಿಕ್ಷಣ ಆಯುಕ್ತರು | (v) ರಿಂದ (viii) | ಸರ್ಕಾರ |
| ವಾಹನ ಚಾಲಕರು | ಸಾರ್ವಜನಿಕ ಶಿಕ್ಷಣ ಆಯುಕ್ತರು | ಸಾರ್ವಜನಿಕ ಶಿಕ್ಷಣ ಉಪ ನಿರ್ದೇಶಕರು, (ಅಲ್ಪಸಂಖ್ಯಾತ ಭಾಷೆಗಳು) | (ii) ರಿಂದ (ivಎ) | ಸಾರ್ವಜನಿಕ ಶಿಕ್ಷಣ ಆಯುಕ್ತರು |
| | | ಸಾರ್ವಜನಿಕ ಶಿಕ್ಷಣ ಆಯುಕ್ತರು | (v) ರಿಂದ (viii) | ಸರ್ಕಾರ |
| **ಕಾರ್ಯದರ್ಶಿ ಮತ್ತು ಸಾರ್ವಜನಿಕ ಶಿಕ್ಷಣ ಪದನಿಮಿತ್ತ ಜಂಟಿ ನಿರ್ದೇಶಕರ ಕಚೇರಿ, ವಿಭಾಗೀಯ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿ, ಬೆಂಗಳೂರು, ಮೈಸೂರು, ಬೆಳಗಾವಿ, ಗುಲ್ಬರ್ಗ** | | | | |
| ಅಧೀಕ್ಷಕ/ ಲೆಕ್ಕಪತ್ರಗಳ ಅಧೀಕ್ಷಕ | ಸಾರ್ವಜನಿಕ ಶಿಕ್ಷಣ ಆಯುಕ್ತರು | ಕಾರ್ಯದರ್ಶಿ/ ಸಾರ್ವಜನಿಕ ಶಿಕ್ಷಣ ಜಂಟಿ ನಿರ್ದೇಶಕರು | (ii) ರಿಂದ (ivಎ) | ಸಾರ್ವಜನಿಕ ಶಿಕ್ಷಣ ಆಯುಕ್ತರು |
| | | ಸಾರ್ವಜನಿಕ ಶಿಕ್ಷಣ ಆಯುಕ್ತರು | (v) ರಿಂದ (viii) | ಸರ್ಕಾರ |
| ಪ್ರಥಮ ದರ್ಜೆ ಸಹಾಯಕ, ಶೀಘ್ರಲಿಪಿಗಾರ | ಸಾರ್ವಜನಿಕ ಶಿಕ್ಷಣ ಜಂಟಿ ನಿರ್ದೇಶಕರು | ಕಾರ್ಯದರ್ಶಿ/ ಸಾರ್ವಜನಿಕ ಶಿಕ್ಷಣ ಜಂಟಿ ನಿರ್ದೇಶಕರು ಮತ್ತು ಸಾರ್ವಜನಿಕ ಶಿಕ್ಷಣ ಜಂಟಿ ನಿರ್ದೇಶಕರು (ಆಡಳಿತ) | (ii) ರಿಂದ (viii) | ಸಾರ್ವಜನಿಕ ಶಿಕ್ಷಣ ಆಯುಕ್ತರು |
| ದ್ವಿತೀಯ ದರ್ಜೆ ಸಹಾಯಕ, ಬೆರಳಚ್ಚುಗಾರ, ಗುಮಾಸ್ತ–ಹಾಗೂ– ಬೆರಳಚ್ಚುಗಾರ | ಸಾರ್ವಜನಿಕ ಶಿಕ್ಷಣ ಜಂಟಿ ನಿರ್ದೇಶಕರು | ಕಾರ್ಯದರ್ಶಿ/ ಸಾರ್ವಜನಿಕ ಶಿಕ್ಷಣ ಜಂಟಿ ನಿರ್ದೇಶಕರು ಮತ್ತು ಸಾರ್ವಜನಿಕ ಶಿಕ್ಷಣ ಜಂಟಿ ನಿರ್ದೇಶಕರು (ಆಡಳಿತ) | (ii) ರಿಂದ (viii) | ಸಾರ್ವಜನಿಕ ಶಿಕ್ಷಣ ಆಯುಕ್ತರು |
| | | ಸಾರ್ವಜನಿಕ ಶಿಕ್ಷಣ ಹಿರಿಯ ಸಹಾಯಕ ನಿರ್ದೇಶಕರು (ಆಡಳಿತ) | (ii) ರಿಂದ (ivಎ) | ಕಾರ್ಯದರ್ಶಿ ಮತ್ತು ಸಾರ್ವಜನಿಕ ಶಿಕ್ಷಣ ಪದನಿಮಿತ್ತ ಜಂಟಿ ನಿರ್ದೇಶಕರು |
| ವಾಹನ ಚಾಲಕರು | ಸಾರ್ವಜನಿಕ ಶಿಕ್ಷಣ ಜಂಟಿ ನಿರ್ದೇಶಕರು | ಕಾರ್ಯದರ್ಶಿ/ ಸಾರ್ವಜನಿಕ ಶಿಕ್ಷಣ ಜಂಟಿ ನಿರ್ದೇಶಕರು ಮತ್ತು ಸಾರ್ವಜನಿಕ ಶಿಕ್ಷಣ ಜಂಟಿ ನಿರ್ದೇಶಕರು (ಆಡಳಿತ) | (ii) ರಿಂದ (viii) | ಸಾರ್ವಜನಿಕ ಶಿಕ್ಷಣ ಆಯುಕ್ತರು |
| | | ಸಾರ್ವಜನಿಕ ಶಿಕ್ಷಣ ಹಿರಿಯ ಸಹಾಯಕ ನಿರ್ದೇಶಕರು (ಆಡಳಿತ) | (ii) ರಿಂದ (ivಎ) | ಕಾರ್ಯದರ್ಶಿ ಮತ್ತು ಸಾರ್ವಜನಿಕ ಶಿಕ್ಷಣ ಪದನಿಮಿತ್ತ ಜಂಟಿ ನಿರ್ದೇಶಕರು |

**ಸಾರ್ವಜನಿಕ ಶಿಕ್ಷಣ ಜಂಟಿ ನಿರ್ದೇಶಕರ ಕಚೇರಿ– ಮಧ್ಯಾಹ್ನದ ಬಿಸಿ ಊಟ**

| | | | | |
|---|---|---|---|---|
| ಅಧೀಕ್ಷಕ/ ಲೆಕ್ಕಪತ್ರಗಳ ಅಧೀಕ್ಷಕ | ಸಾರ್ವಜನಿಕ ಶಿಕ್ಷಣ ಆಯುಕ್ತರು | ಸಾರ್ವಜನಿಕ ಶಿಕ್ಷಣ ಜಂಟಿ ನಿರ್ದೇಶಕರು (ಮಧ್ಯಾಹ್ನದ ಬಿಸಿ ಊಟ) | (ii) ರಿಂದ (ivಎ) | ಸಾರ್ವಜನಿಕ ಶಿಕ್ಷಣ ಆಯುಕ್ತರು |
| | | ಸಾರ್ವಜನಿಕ ಶಿಕ್ಷಣ ಆಯುಕ್ತರು | (v) ರಿಂದ (viii) | ಸರ್ಕಾರ |
| ಪ್ರಥಮ ದರ್ಜೆ ಸಹಾಯಕ ಮತ್ತು ಶೀಘ್ರಲಿಪಿಗಾರ | ಸಾರ್ವಜನಿಕ ಶಿಕ್ಷಣ ಆಯುಕ್ತರು | ಸಾರ್ವಜನಿಕ ಶಿಕ್ಷಣ ಜಂಟಿ ನಿರ್ದೇಶಕರು (ಮಧ್ಯಾಹ್ನದ ಬಿಸಿ ಊಟ)<br>ಸಾರ್ವಜನಿಕ ಶಿಕ್ಷಣ ಆಯುಕ್ತರು | (ii) ರಿಂದ (ivಎ)<br>(v) ರಿಂದ (viii) | ಸಾರ್ವಜನಿಕ ಶಿಕ್ಷಣ ಆಯುಕ್ತರು<br>ಸರ್ಕಾರ |
| ದ್ವಿತೀಯ ದರ್ಜೆ ಸಹಾಯಕ/ ಬೆರಳಚ್ಚುಗಾರ, ಗುಮಾಸ್ತ–ಹಾಗೂ– ಬೆರಳಚ್ಚುಗಾರ | ಸಾರ್ವಜನಿಕ ಶಿಕ್ಷಣ ಆಯುಕ್ತರು | ಸಾರ್ವಜನಿಕ ಶಿಕ್ಷಣ ಜಂಟಿ ನಿರ್ದೇಶಕರು (ಮಧ್ಯಾಹ್ನದ ಬಿಸಿ ಊಟ)<br>ಸಾರ್ವಜನಿಕ ಶಿಕ್ಷಣ ಆಯುಕ್ತರು | (ii) ರಿಂದ (ivಎ)<br>(v) ರಿಂದ (viii) | ಸಾರ್ವಜನಿಕ ಶಿಕ್ಷಣ ಆಯುಕ್ತರು<br>ಸರ್ಕಾರ |
| ವಾಹನ ಚಾಲಕರು | ಸಾರ್ವಜನಿಕ ಶಿಕ್ಷಣ ಆಯುಕ್ತರು | ಸಾರ್ವಜನಿಕ ಶಿಕ್ಷಣ ಜಂಟಿ ನಿರ್ದೇಶಕರು (ಮಧ್ಯಾಹ್ನದ ಬಿಸಿ ಊಟ) | (ii) ರಿಂದ (ivಎ) | ಸಾರ್ವಜನಿಕ ಶಿಕ್ಷಣ ಆಯುಕ್ತರು |
| | | ಸಾರ್ವಜನಿಕ ಶಿಕ್ಷಣ ಆಯುಕ್ತರು | (v) ರಿಂದ (viii) | ಸರ್ಕಾರ |

**ಸಾರ್ವಜನಿಕ ಶಿಕ್ಷಣ ಜಿಲ್ಲಾ ಉಪನಿರ್ದೇಶಕರ ಕಚೇರಿ (ಆಡಳಿತ):**

| | | | | |
|---|---|---|---|---|
| ಅಧೀಕ್ಷಕ | ಸಾರ್ವಜನಿಕ ಶಿಕ್ಷಣ ಆಯುಕ್ತರು | ಸಾರ್ವಜನಿಕ ಶಿಕ್ಷಣ ಉಪ ನಿರ್ದೇಶಕರು | (ii) ರಿಂದ (ivಎ) | ಸಾರ್ವಜನಿಕ ಶಿಕ್ಷಣ ವಿಭಾಗೀಯ ಜಂಟಿ ನಿರ್ದೇಶಕರು |
| | | ಸಾರ್ವಜನಿಕ ಶಿಕ್ಷಣ ಆಯುಕ್ತರು | (v) ರಿಂದ (viii) | ಸರ್ಕಾರ |
| ಪ್ರಥಮ ದರ್ಜೆ ಸಹಾಯಕ ಮತ್ತು ಶೀಘ್ರಲಿಪಿಗಾರ | ಸಾರ್ವಜನಿಕ ಶಿಕ್ಷಣ ವಿಭಾಗೀಯ ಜಂಟಿ ನಿರ್ದೇಶಕರು | ಸಾರ್ವಜನಿಕ ಶಿಕ್ಷಣ ಜಿಲ್ಲಾ ಉಪ ನಿರ್ದೇಶಕರು | (ii) ರಿಂದ (ivಎ) | ಸಾರ್ವಜನಿಕ ಶಿಕ್ಷಣ ವಿಭಾಗೀಯ ಜಂಟಿ ನಿರ್ದೇಶಕರು |
| | | ಸಾರ್ವಜನಿಕ ಶಿಕ್ಷಣ ವಿಭಾಗೀಯ ಜಂಟಿ ನಿರ್ದೇಶಕರು | (v) ರಿಂದ (viii) | ಸಾರ್ವಜನಿಕ ಶಿಕ್ಷಣ ಆಯುಕ್ತರು |
| ದ್ವಿತೀಯ ದರ್ಜೆ ಸಹಾಯಕ, ಬೆರಳಚ್ಚುಗಾರ, ಗುಮಾಸ್ತ–ಹಾಗೂ– ಬೆರಳಚ್ಚುಗಾರ | ಸಾರ್ವಜನಿಕ ಶಿಕ್ಷಣ ಉಪ ನಿರ್ದೇಶಕರು | ಗೆಜೆಟೆಡ್ ಸಹಾಯಕ | (ii) ರಿಂದ (ivಎ) | ಸಾರ್ವಜನಿಕ ಶಿಕ್ಷಣ ಉಪ ನಿರ್ದೇಶಕರು |
| | | ಸಾರ್ವಜನಿಕ ಶಿಕ್ಷಣ ಉಪ ನಿರ್ದೇಶಕರು | (ii) ರಿಂದ (ivಎ) | ಸಾರ್ವಜನಿಕ ಶಿಕ್ಷಣ ವಿಭಾಗೀಯ ಜಂಟಿ ನಿರ್ದೇಶಕರು |

| | | | | |
|---|---|---|---|---|
| ವಾಹನ ಚಾಲಕರು | ಸಾರ್ವಜನಿಕ ಶಿಕ್ಷಣ ಉಪ ನಿರ್ದೇಶಕರು | ಗೆಜೆಟೆಡ್ ಸಹಾಯಕ | (ii) ರಿಂದ (ivಎ) | ಸಾರ್ವಜನಿಕ ಶಿಕ್ಷಣ ಉಪ ನಿರ್ದೇಶಕರು |
| | | ಸಾರ್ವಜನಿಕ ಶಿಕ್ಷಣ ಉಪ ನಿರ್ದೇಶಕರು | (v) ರಿಂದ (viii) | ಸಾರ್ವಜನಿಕ ಶಿಕ್ಷಣ ವಿಭಾಗೀಯ ಜಂಟಿ ನಿರ್ದೇಶಕರು |
| **ಕ್ಷೇತ್ರ ಶಿಕ್ಷಣಾಧಿಕಾರಿಯವರ ಕಚೇರಿ** | | | | |
| ಅಧೀಕ್ಷಕ | ಸಾರ್ವಜನಿಕ ಶಿಕ್ಷಣ ಆಯುಕ್ತರು | ಸಾರ್ವಜನಿಕ ಶಿಕ್ಷಣ ಉಪ ನಿರ್ದೇಶಕರು | (ii) ರಿಂದ (ivಎ) | ಸಾರ್ವಜನಿಕ ಶಿಕ್ಷಣ ವಿಭಾಗೀಯ ಜಂಟಿ ನಿರ್ದೇಶಕರು |
| | | ಸಾರ್ವಜನಿಕ ಶಿಕ್ಷಣ ಆಯುಕ್ತರು | (v) ರಿಂದ (viii) | ಸರ್ಕಾರ |
| ಪ್ರಥಮ ದರ್ಜೆ ಸಹಾಯಕ | ಸಾರ್ವಜನಿಕ ಶಿಕ್ಷಣ ವಿಭಾಗೀಯ ಜಂಟಿ ನಿರ್ದೇಶಕರು | ಕ್ಷೇತ್ರ ಶಿಕ್ಷಣಾಧಿಕಾರಿ | (ii) ರಿಂದ (ivಎ) | ಸಾರ್ವಜನಿಕ ಶಿಕ್ಷಣ ಉಪ ನಿರ್ದೇಶಕರು |
| | | ಸಾರ್ವಜನಿಕ ಶಿಕ್ಷಣ ಜಂಟಿ ನಿರ್ದೇಶಕರು | (v) ರಿಂದ (viii) | ಸಾರ್ವಜನಿಕ ಶಿಕ್ಷಣ ಆಯುಕ್ತರು |
| ದ್ವಿತೀಯ ದರ್ಜೆ ಸಹಾಯಕ, ಗುಮಾಸ್ತ–ಹಾಗೂ–ಬೆರಳಚ್ಚುಗಾರ/ ಬೆರಳಚ್ಚುಗಾರ | ಸಾರ್ವಜನಿಕ ಶಿಕ್ಷಣ ಉಪ ನಿರ್ದೇಶಕರು | ಕ್ಷೇತ್ರ ಶಿಕ್ಷಣಾಧಿಕಾರಿ | (ii) ರಿಂದ (ivಎ) | ಸಾರ್ವಜನಿಕ ಶಿಕ್ಷಣ ಉಪ ನಿರ್ದೇಶಕರು |
| | | ಸಾರ್ವಜನಿಕ ಶಿಕ್ಷಣ ಉಪ ನಿರ್ದೇಶಕರು | (v) ರಿಂದ (viii) | ಸಾರ್ವಜನಿಕ ಶಿಕ್ಷಣ ವಿಭಾಗೀಯ ಜಂಟಿ ನಿರ್ದೇಶಕರು |
| ವಾಹನ ಚಾಲಕರು | ಸಾರ್ವಜನಿಕ ಶಿಕ್ಷಣ ಉಪ ನಿರ್ದೇಶಕರು | ಕ್ಷೇತ್ರ ಶಿಕ್ಷಣಾಧಿಕಾರಿ | (ii) ರಿಂದ (ivಎ) | ಸಾರ್ವಜನಿಕ ಶಿಕ್ಷಣ ಉಪ ನಿರ್ದೇಶಕರು |
| | | ಸಾರ್ವಜನಿಕ ಶಿಕ್ಷಣ ಉಪ ನಿರ್ದೇಶಕರು | (v) ರಿಂದ (viii) | ಸಾರ್ವಜನಿಕ ಶಿಕ್ಷಣ ವಿಭಾಗೀಯ ಜಂಟಿ ನಿರ್ದೇಶಕರು |
| **ಸರ್ಕಾರಿ ಪ್ರೌಢಶಾಲೆಗಳ ಮುಖ್ಯೋಪಾಧ್ಯಾಯರ ಕಚೇರಿ** | | | | |
| ಪ್ರಥಮ ದರ್ಜೆ ಸಹಾಯಕ | ಸಾರ್ವಜನಿಕ ಶಿಕ್ಷಣ ವಿಭಾಗೀಯ ಜಂಟಿ ನಿರ್ದೇಶಕರು | ಮುಖ್ಯೋಪಾಧ್ಯಾಯರು | (ii) | ಸಾರ್ವಜನಿಕ ಶಿಕ್ಷಣ ಜಿಲ್ಲಾ ಉಪ ನಿರ್ದೇಶಕರು |
| | | ಸಾರ್ವಜನಿಕ ಶಿಕ್ಷಣ ಜಿಲ್ಲಾ ಉಪ ನಿರ್ದೇಶಕರು | (iii)ರಿಂದ (ivಎ) | ಸಾರ್ವಜನಿಕ ಶಿಕ್ಷಣ ವಿಭಾಗೀಯ ಜಂಟಿ ನಿರ್ದೇಶಕರು |
| | | ಸಾರ್ವಜನಿಕ ಶಿಕ್ಷಣ ವಿಭಾಗೀಯ ಜಂಟಿ ನಿರ್ದೇಶಕರು | (v) ರಿಂದ (viii) | ಸಾರ್ವಜನಿಕ ಶಿಕ್ಷಣ ಆಯುಕ್ತರು |

| | | | | |
|---|---|---|---|---|
| ದ್ವಿತೀಯ ದರ್ಜೆ ಸಹಾಯಕ/ ಗುಮಾಸ್ತ– ಹಾಗೂ– ಬೆರಳಚ್ಚುಗಾರ | ಸಾರ್ವಜನಿಕ ಶಿಕ್ಷಣ ಉಪ ನಿರ್ದೇಶಕರು | ಮುಖ್ಯೋಪಾಧ್ಯಾಯರು | (ii) | ಸಾರ್ವಜನಿಕ ಶಿಕ್ಷಣ ಜಿಲ್ಲಾ ಉಪ ನಿರ್ದೇಶಕರು |
| | | ಸಾರ್ವಜನಿಕ ಶಿಕ್ಷಣ ಉಪನಿರ್ದೇಶಕರು | (iii)ರಿಂದ (viii) | ಸಾರ್ವಜನಿಕ ಶಿಕ್ಷಣ ವಿಭಾಗೀಯ ಜಂಟಿ ನಿರ್ದೇಶಕರು |
| **ಸಾರ್ವಜನಿಕ ಶಿಕ್ಷಣ ನಿರ್ದೇಶಕರ ಕಚೇರಿ (ಡಿಎಸ್ಇಆರ್‌ಟಿ)** | | | | |
| ಅಧೀಕ್ಷಕರು | ಸಾರ್ವಜನಿಕ ಶಿಕ್ಷಣ ಆಯುಕ್ತರು | ಸಾರ್ವಜನಿಕ ಶಿಕ್ಷಣ ನಿರ್ದೇಶಕರು, ರಾಜ್ಯ ಶೈಕ್ಷಣಿಕ ಸಂಶೋಧನೆ ಮತ್ತು ತರಬೇತಿ ನಿರ್ದೇಶಕರು | (ii) ರಿಂದ (ivಎ) | ಸಾರ್ವಜನಿಕ ಶಿಕ್ಷಣ ಆಯುಕ್ತರು |
| | | ಸಾರ್ವಜನಿಕ ಶಿಕ್ಷಣ ಆಯುಕ್ತರು | (v) ರಿಂದ (viii) | ಸರ್ಕಾರ |
| ಪ್ರಥಮ ದರ್ಜೆ ಸಹಾಯಕ, ಶೀಘ್ರಲಿಪಿಗಾರ | ಸಾರ್ವಜನಿಕ ಶಿಕ್ಷಣ ಆಯುಕ್ತರು | ಸಾರ್ವಜನಿಕ ಶಿಕ್ಷಣ ನಿರ್ದೇಶಕರು, ರಾಜ್ಯ ಶೈಕ್ಷಣಿಕ ಸಂಶೋಧನೆ ಮತ್ತು ತರಬೇತಿ ನಿರ್ದೇಶಕರು | (ii) ರಿಂದ (ivಎ) | ಸಾರ್ವಜನಿಕ ಶಿಕ್ಷಣ ಆಯುಕ್ತರು |
| | | ಸಾರ್ವಜನಿಕ ಶಿಕ್ಷಣ ಆಯುಕ್ತರು | (v) ರಿಂದ (viii) | ಸರ್ಕಾರ |
| ದ್ವಿತೀಯ ದರ್ಜೆ ಸಹಾಯಕ, ಬೆರಳಚ್ಚುಗಾರ, ಗುಮಾಸ್ತ– ಹಾಗೂ– ಬೆರಳಚ್ಚುಗಾರ | ಸಾರ್ವಜನಿಕ ಶಿಕ್ಷಣ ಆಯುಕ್ತರು | ಸಾರ್ವಜನಿಕ ಶಿಕ್ಷಣ ಜಂಟಿ ನಿರ್ದೇಶಕರು, ರಾಜ್ಯ ಶೈಕ್ಷಣಿಕ ಸಂಶೋಧನೆ ಮತ್ತು ತರಬೇತಿ ನಿರ್ದೇಶಕರು | (ii) ರಿಂದ (ivಎ) | ಸಾರ್ವಜನಿಕ ಶಿಕ್ಷಣ ನಿರ್ದೇಶಕರು, (ರಾಜ್ಯ ಶೈಕ್ಷಣಿಕ ಸಂಶೋಧನೆ ಮತ್ತು ತರಬೇತಿ ನಿರ್ದೇಶಕರು) |
| | | ಸಾರ್ವಜನಿಕ ಶಿಕ್ಷಣ ಆಯುಕ್ತರು | (v) ರಿಂದ (viii) | ಸರ್ಕಾರ |
| ವಾಹನ ಚಾಲಕರು | ಸಾರ್ವಜನಿಕ ಶಿಕ್ಷಣ ಆಯುಕ್ತರು | ಸಾರ್ವಜನಿಕ ಶಿಕ್ಷಣ ಜಂಟಿ ನಿರ್ದೇಶಕರು, (ರಾಜ್ಯ ಶೈಕ್ಷಣಿಕ ಸಂಶೋಧನೆ ಮತ್ತು ತರಬೇತಿ ನಿರ್ದೇಶಕರು) | (ii) ರಿಂದ (ivಎ) | ಸಾರ್ವಜನಿಕ ಶಿಕ್ಷಣ ಆಯುಕ್ತರು |
| | | ಸಾರ್ವಜನಿಕ ಶಿಕ್ಷಣ ಆಯುಕ್ತರು | (v) ರಿಂದ (viii) | ಸರ್ಕಾರ |

| | | | | |
|---|---|---|---|---|
| **ಶಿಕ್ಷಕರ ಶಿಕ್ಷಣ ಕಾಲೇಜುಗಳ ಕಚೇರಿ: ಮೈಸೂರು, ಮಂಗಳೂರು, ಚಿತ್ರದುರ್ಗ, ಬೆಳಗಾಂ, ಜಮಖಂಡಿ ಮತ್ತು ಗುಲ್ಬರ್ಗ** | | | | |
| ಪ್ರಥಮ ದರ್ಜೆ ಸಹಾಯಕ, ಶೀಘ್ರಲಿಪಿಗಾರ ಮತ್ತು ದ್ವಿತೀಯ ದರ್ಜೆ ಸಹಾಯಕ, ಬೆರಳಚ್ಚುಗಾರ, ಗುಮಾಸ್ತ–ಹಾಗೂ–ಬೆರಳಚ್ಚುಗಾರ | ಸಾರ್ವಜನಿಕ ಶಿಕ್ಷಣ ನಿರ್ದೇಶಕರು | ಪ್ರಾಂಶುಪಾಲರು | (ii) ರಿಂದ (ivಎ) | ಸಾರ್ವಜನಿಕ ಶಿಕ್ಷಣ ಜಂಟಿ ನಿರ್ದೇಶಕರು, ರಾಜ್ಯ ಶೈಕ್ಷಣಿಕ ಸಂಶೋಧನೆ ಮತ್ತು ತರಬೇತಿ ನಿರ್ದೇಶಕರು |
| | ರಾಜ್ಯ ಶೈಕ್ಷಣಿಕ ಸಂಶೋಧನೆ ಮತ್ತು ತರಬೇತಿ ನಿರ್ದೇಶಕರು | ಸಾರ್ವಜನಿಕ ಶಿಕ್ಷಣ ನಿರ್ದೇಶಕರು | (v) ರಿಂದ (viii) | ಸಾರ್ವಜನಿಕ ಶಿಕ್ಷಣ ಆಯುಕ್ತರು |
| **ರಾಜ್ಯದಲ್ಲಿರುವ ಶಿಕ್ಷಣ ಮತ್ತು ತರಬೇತಿ ಜಿಲ್ಲಾ ಸಂಸ್ಥೆ ಪ್ರಾಂಶುಪಾಲರ ಕಚೇರಿ** | | | | |
| ಅಧೀಕ್ಷಕ, ಅಕೌಂಟೆಂಟ್ | ಸಾರ್ವಜನಿಕ ಶಿಕ್ಷಣ ಆಯುಕ್ತರು | ಪ್ರಾಂಶುಪಾಲರು | (ii) ರಿಂದ (ivಎ) | ಸಾರ್ವಜನಿಕ ಶಿಕ್ಷಣ ವಿಭಾಗೀಯ ಜಂಟಿನಿರ್ದೇಶಕರು |
| | | ಸಾರ್ವಜನಿಕ ಶಿಕ್ಷಣ ಆಯುಕ್ತರು | (v) ರಿಂದ (viii) | ಸರ್ಕಾರ |
| ಪ್ರಥಮ ದರ್ಜೆ ಸಹಾಯಕ, ಶೀಘ್ರಲಿಪಿಗಾರ | ಸಾರ್ವಜನಿಕ ಶಿಕ್ಷಣ ನಿರ್ದೇಶಕರು (ರಾಜ್ಯ ಶೈಕ್ಷಣಿಕ ಸಂಶೋಧನೆ ಮತ್ತು ತರಬೇತಿ ನಿರ್ದೇಶಕರು) | ಪ್ರಾಂಶುಪಾಲರು | (ii) ರಿಂದ (ivಎ) | ಸಾರ್ವಜನಿಕ ಶಿಕ್ಷಣ ವಿಭಾಗೀಯ ಜಂಟಿನಿರ್ದೇಶಕರು |
| | | ಸಾರ್ವಜನಿಕ ಶಿಕ್ಷಣ ನಿರ್ದೇಶಕರು | (v) ರಿಂದ (viii) | ಸಾರ್ವಜನಿಕ ಶಿಕ್ಷಣ ಆಯುಕ್ತರು |
| ದ್ವಿತೀಯ ದರ್ಜೆ ಸಹಾಯಕ, ಬೆರಳಚ್ಚುಗಾರ, ಗುಮಾಸ್ತ– ಹಾಗೂ– ಬೆರಳಚ್ಚುಗಾರ | ಸಾರ್ವಜನಿಕ ಶಿಕ್ಷಣ ನಿರ್ದೇಶಕರು (ರಾಜ್ಯ ಶೈಕ್ಷಣಿಕ ಸಂಶೋಧನೆ ಮತ್ತು ತರಬೇತಿ ನಿರ್ದೇಶಕರು) | ಪ್ರಾಂಶುಪಾಲರು | (ii) ರಿಂದ (ivಎ) | ಸಾರ್ವಜನಿಕ ಶಿಕ್ಷಣ ನಿರ್ದೇಶಕರು (ರಾಜ್ಯ ಶೈಕ್ಷಣಿಕ ಸಂಶೋಧನೆ ಮತ್ತು ತರಬೇತಿ ನಿರ್ದೇಶಕರು) |
| | | ಸಾರ್ವಜನಿಕ ಶಿಕ್ಷಣ ನಿರ್ದೇಶಕರು (ರಾಜ್ಯ ಶೈಕ್ಷಣಿಕ ಸಂಶೋಧನೆ ಮತ್ತು ತರಬೇತಿ ನಿರ್ದೇಶಕರು) | (v) ರಿಂದ (viii) | ಸಾರ್ವಜನಿಕ ಶಿಕ್ಷಣ ಆಯುಕ್ತರು |

| | | | | |
|---|---|---|---|---|
| ವಾಹನ ಚಾಲಕರು | ಸಾರ್ವಜನಿಕ ಶಿಕ್ಷಣ ನಿರ್ದೇಶಕರು (ರಾಜ್ಯ ಶೈಕ್ಷಣಿಕ ಸಂಶೋಧನೆ ಮತ್ತು ತರಬೇತಿ ನಿರ್ದೇಶಕರು) | ಪ್ರಾಂಶುಪಾಲರು | (ii) ರಿಂದ (ivಎ) | ಸಾರ್ವಜನಿಕ ಶಿಕ್ಷಣ ನಿರ್ದೇಶಕರು (ರಾಜ್ಯ ಶೈಕ್ಷಣಿಕ ಸಂಶೋಧನೆ ಮತ್ತು ತರಬೇತಿ ನಿರ್ದೇಶಕರು) |
| | | ಸಾರ್ವಜನಿಕ ಶಿಕ್ಷಣ ನಿರ್ದೇಶಕರು (ರಾಜ್ಯ ಶೈಕ್ಷಣಿಕ ಸಂಶೋಧನೆ ಮತ್ತು ತರಬೇತಿ ನಿರ್ದೇಶಕರು) | (v) ರಿಂದ (viii) | ಸಾರ್ವಜನಿಕ ಶಿಕ್ಷಣ ಆಯುಕ್ತರು |
| **ರಾಜ್ಯ ಶೈಕ್ಷಣಿಕ ಸಂಶೋಧನೆ ಮತ್ತು ತರಬೇತಿ ನಿರ್ದೇಶಕರ ಕಚೇರಿ, ಸರ್ಕಾರಿ ಶಿಕ್ಷಕರ ತರಬೇತಿ ಸಂಸ್ಥೆಗಳ ಕಚೇರಿ** | | | | |
| ಪ್ರಥಮ ದರ್ಜೆ ಸಹಾಯಕ | ಸಾರ್ವಜನಿಕ ಶಿಕ್ಷಣ ನಿರ್ದೇಶಕರು (ರಾಜ್ಯ ಶೈಕ್ಷಣಿಕ ಸಂಶೋಧನೆ ಮತ್ತು ತರಬೇತಿ ನಿರ್ದೇಶಕರು) | ಪ್ರಾಂಶುಪಾಲರು, ಶಿಕ್ಷಕರ ತರಬೇತಿ ಸಂಸ್ಥೆ | (ii) | ಸಾರ್ವಜನಿಕ ಶಿಕ್ಷಣ ಉಪ ನಿರ್ದೇಶಕರು (ರಾಜ್ಯ ಶೈಕ್ಷಣಿಕ ಸಂಶೋಧನೆ ಮತ್ತು ತರಬೇತಿ ನಿರ್ದೇಶಕರು) |
| | | ಸಾರ್ವಜನಿಕ ಶಿಕ್ಷಣ ಉಪ ನಿರ್ದೇಶಕರು | (ii) ರಿಂದ (ivಎ) | ಸಾರ್ವಜನಿಕ ಶಿಕ್ಷಣ ಜಂಟಿ ನಿರ್ದೇಶಕರು |
| | | ಸಾರ್ವಜನಿಕ ಶಿಕ್ಷಣ ನಿರ್ದೇಶಕರು (ರಾಜ್ಯ ಶೈಕ್ಷಣಿಕ ಸಂಶೋಧನೆ ಮತ್ತು ತರಬೇತಿ ನಿರ್ದೇಶಕರು) | (v) ರಿಂದ (viii) | ಸಾರ್ವಜನಿಕ ಶಿಕ್ಷಣ ಆಯುಕ್ತರು |
| ದ್ವಿತೀಯ ದರ್ಜೆ ಸಹಾಯಕರು, ಬೆರಳಚ್ಚುಗಾರ, ಗುಮಾಸ್ತ–ಹಾಗೂ– ಬೆರಳಚ್ಚುಗಾರ | ಸಾರ್ವಜನಿಕ ಶಿಕ್ಷಣ ನಿರ್ದೇಶಕರು (ರಾಜ್ಯ ಶೈಕ್ಷಣಿಕ ಸಂಶೋಧನೆ ಮತ್ತು ತರಬೇತಿ ನಿರ್ದೇಶಕರು) | ಪ್ರಾಂಶುಪಾಲರು, ಶಿಕ್ಷಕರ ತರಬೇತಿ ಸಂಸ್ಥೆ | (ii) | ಸಾರ್ವಜನಿಕ ಶಿಕ್ಷಣ ಉಪನಿರ್ದೇಶಕರು (ರಾಜ್ಯ ಶೈಕ್ಷಣಿಕ ಸಂಶೋಧನೆ ಮತ್ತು ತರಬೇತಿ ನಿರ್ದೇಶಕರು) |
| | | ಸಾರ್ವಜನಿಕ ಶಿಕ್ಷಣ ನಿರ್ದೇಶಕರು (ರಾಜ್ಯ ಶೈಕ್ಷಣಿಕ ಸಂಶೋಧನೆ ಮತ್ತು ತರಬೇತಿ ನಿರ್ದೇಶಕರು) | (iii)ರಿಂದ (viii) | ಸಾರ್ವಜನಿಕ ಶಿಕ್ಷಣ ಆಯುಕ್ತರು |

**ಕರ್ನಾಟಕ ಸರ್ಕಾರ**

ಸಂಖ್ಯೆ. ಡಿಪಿಎಆರ್ 7 ಎಸ್‌ಡಿಇ 2005

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಧಾನಸೌಧ,
ಬೆಂಗಳೂರು, ದಿನಾಂಕ 01.08.2005

**ಅಧಿಸೂಚನೆ**

ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು, 1957ನ್ನು ಮತ್ತಷ್ಟು ತಿದ್ದುಪಡಿ ಮಾಡಲು ಈ ಮುಂದಿನ ನಿಯಮಗಳ ಕರಡನ್ನು, ಅದರಿಂದ ಬಾಧಿತರಾಗುವ ಸಂಭವವಿರುವ ಎಲ್ಲಾ ವ್ಯಕ್ತಿಗಳಿಂದ, ಸರ್ಕಾರಿ ರಾಜ್ಯಪತ್ರದಲ್ಲಿ ಅದನ್ನು ಪ್ರಕಟಿಸಿದ ದಿನಾಂಕದಿಂದ 30 ದಿನಗಳೊಳಗಾಗಿ ಆಕ್ಷೇಪಣೆಗಳನ್ನು ಮತ್ತು ಸಲಹೆಗಳನ್ನು ಆಹ್ವಾನಿಸಿ, ಕರ್ನಾಟಕ ರಾಜ್ಯ ಸಿವಿಲ್ ಸೇವಾ ಅಧಿನಿಯಮ, 1978 (ಕರ್ನಾಟಕ ಅಧಿನಿಯಮ 1990ರ 14)ರ 3ನೇ ಪ್ರಕರಣದ (2)ನೇ ಉಪಪ್ರಕರಣದ (ಎ) ಖಂಡದ ಮೂಲಕ ಅಗತ್ಯಪಡಿಸಲಾದಂತೆ, ದಿನಾಂಕ 11ನೇ ಜುಲೈ 2005ರ ಕರ್ನಾಟಕ ವಿಶೇಷ ರಾಜ್ಯಪತ್ರದ ಭಾಗ–IVಎ, (ಪಿ.ಆರ್. ಸಂಖ್ಯೆ. 1301) ರಲ್ಲಿ ಅಧಿಸೂಚನೆ ಸಂಖ್ಯೆ ಡಿಪಿಎಆರ್ 7 ಎಸ್‌ಡಿಇ 2005, ದಿನಾಂಕ 29ನೇ ಜೂನ್ 2005 ರಲ್ಲಿ ಪ್ರಕಟಿಸಿರುವುದರಿಂದ;

ಸದರಿ ರಾಜ್ಯಪತ್ರವನ್ನು 11.07.2005 ರಂದು ಸಾರ್ವಜನಿಕರಿಗೆ ಲಭ್ಯವಾಗುವಂತೆ ಮಾಡಿರುವುದರಿಂದ;

ಮತ್ತು ಸದರಿ ಕರಡು ನಿಯಮಗಳ ಬಗ್ಗೆ ರಾಜ್ಯ ಸರ್ಕಾರಕ್ಕೆ ಯಾವ ಆಕ್ಷೇಪಣೆಗಳೂ ಮತ್ತು ಸಲಹೆಗಳೂ ಬಾರದಿರುವುದರಿಂದ;

ಈಗ ಕರ್ನಾಟಕ ಸಿವಿಲ್ ಸೇವಾ ಅಧಿನಿಯಮ, 1978 (ಕರ್ನಾಟಕ ಅಧಿನಿಯಮ 1990ರ 14)ರ 8ನೇ ಪ್ರಕರಣದೊಂದಿಗೆ ಓದಿಕೊಂಡ 3ನೇ ಪ್ರಕರಣದ (1)ನೇ ಉಪಪ್ರಕರಣದಿಂದ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು, ಈ ಮೂಲಕ ಈ ಮುಂದಿನ ನಿಯಮಗಳನ್ನು ರಚಿಸುತ್ತದೆ. ಎಂದರೆ:–

**ನಿಯಮಗಳು**

**1. ಹೆಸರು ಮತ್ತು ಪ್ರಾರಂಭ.**– (1) ಈ ನಿಯಮಗಳನ್ನು ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) (17ನೇ ತಿದ್ದುಪಡಿ) ನಿಯಮಗಳು, 2005 ಎಂದು ಕರೆಯತಕ್ಕದ್ದು.

(2) ಅವು ಸರ್ಕಾರಿ ರಾಜ್ಯಪತ್ರದಲ್ಲಿ ಅವುಗಳನ್ನು ಪ್ರಕಟಿಸಿದ ದಿನಾಂಕದಿಂದ ಜಾರಿಗೆ ಬರತಕ್ಕದ್ದು.

**2. ಅನುಸೂಚಿ IIರ ತಿದ್ದುಪಡಿ.**– ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು, 1957 ರಲ್ಲಿ (ಇಲ್ಲಿ ಇನ್ನು ಮುಂದೆ ಸದರಿ ನಿಯಮಗಳು ಎಂದು ಉಲ್ಲೇಖಿಸಲಾಗಿದೆ) "ಸಹಕಾರಿ ಇಲಾಖೆ" ಶೀರ್ಷಿಕೆ ಅಡಿಯಲ್ಲಿ ಇರುವ ನಮೂದುಗಳ ಬದಲಾಗಿ ಈ ಮುಂದಿನ ನಮೂದುಗಳನ್ನು ಸೇರಿಸತಕ್ಕದ್ದು, ಎಂದರೆ:–

**ಸಹಕಾರ ಸಂಘಗಳ ರಿಜಿಸ್ಟ್ರಾರರ ಕಚೇರಿ, ಕರ್ನಾಟಕ ಬೆಂಗಳೂರು:**

| | | | | |
|---|---|---|---|---|
| ಅಧೀಕ್ಷಕರು, ಸಹಕಾರ ಸಂಘಗಳ ಹಿರಿಯ ಪರಿವೀಕ್ಷಕರು, ಮುಖ್ಯ ಗುಮಾಸ್ತರು, ಹಿರಿಯ ದರ್ಜೆ ಲೆಕ್ಕ ಪರಿಶೋಧಕರು, ಸಹಕಾರ ಸಂಘಗಳ ಪರಿವೀಕ್ಷಕರು, ಹಿರಿಯ ಲೆಕ್ಕ ಪರಿಶೋಧಕರು | ರಿಜಿಸ್ಟ್ರಾರ್ | ರಿಜಿಸ್ಟ್ರಾರ್ | (ii)ರಿಂದ (viii) | ಸರ್ಕಾರ |
| ಪ್ರಥಮ ದರ್ಜೆ ಸಹಾಯಕ, ದ್ವಿತೀಯ ದರ್ಜೆ ಸಹಾಯಕ, ಶೀಘ್ರಲಿಪಿಗಾರರು, ಹಿರಿಯ ಬೆರಳಚ್ಚುಗಾರರು, ಬೆರಳಚ್ಚುಗಾರರು, ಹಿರಿಯ ವಾಹನ ಚಾಲಕರು, ವಾಹನ ಚಾಲಕರು | ರಿಜಿಸ್ಟ್ರಾರ್ | ಸಹಕಾರ ಸಂಘಗಳ ಹೆಚ್ಚುವರಿ ರಿಜಿಸ್ಟ್ರಾರ್/ ಸಹಕಾರ ಸಂಘಗಳ ಜಂಟಿ ರಿಜಿಸ್ಟ್ರಾರ್ (ಆಡಳಿತ ಮತ್ತು ಅಭಿವೃದ್ಧಿ)<br>ರಿಜಿಸ್ಟ್ರಾರ್ | (ii) ರಿಂದ (ivಎ)<br>(v) ರಿಂದ (viii) | ರಿಜಿಸ್ಟ್ರಾರ್<br>ಸರ್ಕಾರ |

**ಸಹಕಾರ ಸಂಘಗಳ ಪ್ರಾದೇಶಿಕ ಜಂಟಿ ರಿಜಿಸ್ಟ್ರಾರರ ಕಚೇರಿ**

| | | | | |
|---|---|---|---|---|
| ಅಧೀಕ್ಷಕರು, ಮುಖ್ಯ ಗುಮಾಸ್ತರು, ಹಿರಿಯ ಪರಿವೀಕ್ಷಕರು, ಹಿರಿಯ ದರ್ಜೆ ಲೆಕ್ಕಪರಿಶೋಧಕರು ಪರಿವೀಕ್ಷಕರು, ಹಿರಿಯ ಲೆಕ್ಕಪರಿಶೋಧಕರು | ರಿಜಿಸ್ಟ್ರಾರ್ | ರಿಜಿಸ್ಟ್ರಾರ್ | (ii)ರಿಂದ (viii) | ಸರ್ಕಾರ |

| | | | | |
|---|---|---|---|---|
| ಪ್ರಥಮ ದರ್ಜೆ ಸಹಾಯಕರು, ದ್ವಿತೀಯ ದರ್ಜೆ ಸಹಾಯಕರು, ಶೀಘ್ರಲಿಪಿಗಾರರು, ಹಿರಿಯ ಬೆರಳಚ್ಚುಗಾರರು, ಬೆರಳಚ್ಚುಗಾರರು, ಕಿರಿಯ ಪರಿವೀಕ್ಷಕರು, ಕಿರಿಯ ಲೆಕ್ಕಪರಿಶೋಧಕರು, ಹಿರಿಯ ವಾಹನ ಚಾಲಕರು, ವಾಹನ ಚಾಲಕರು | ರಿಜಿಸ್ಟ್ರಾರ್ | ಸಹಕಾರ ಸಂಘಗಳ ಹೆಚ್ಚುವರಿ ರಿಜಿಸ್ಟ್ರಾರ್/ ಸಹಕಾರ ಸಂಘಗಳ ಜಂಟಿ ರಿಜಿಸ್ಟ್ರಾರ್ (ಆಡಳಿತ ಮತ್ತು ಅಭಿವೃದ್ಧಿ) | (ii)ರಿಂದ (ivಎ) | ರಿಜಿಸ್ಟ್ರಾರ್ |
| | | ರಿಜಿಸ್ಟ್ರಾರ್ | (v)ರಿಂದ (viii) | ಸರ್ಕಾರ |
| **ಸಹಕಾರ ಸಂಘಗಳ ಜಿಲ್ಲಾ ಉಪ ರಿಜಿಸ್ಟ್ರಾರರ ಕಚೇರಿ** | | | | |
| ಅಧೀಕ್ಷಕರು, ಮುಖ್ಯ ಗುಮಾಸ್ತರು, ಹಿರಿಯ ಪರಿವೀಕ್ಷಕರು, ಹಿರಿಯ ದರ್ಜೆ ಲೆಕ್ಕಪರಿಶೋಧಕರು, ಹಿರಿಯ ಲೆಕ್ಕ ಪರಿಶೋಧಕರು, ಸಹಕಾರ ಸಂಘಗಳ ಪರಿವೀಕ್ಷಕರು | ರಿಜಿಸ್ಟ್ರಾರ್ | ಸಹಕಾರ ಸಂಘಗಳ ಉಪ ರಿಜಿಸ್ಟ್ರಾರ್ | (ii) ರಿಂದ (iv ಎ) | ರಿಜಿಸ್ಟ್ರಾರ್ |
| | | ರಿಜಿಸ್ಟ್ರಾರ್ | (v)ರಿಂದ (viii) | ಸರ್ಕಾರ |
| ಪ್ರಥಮ ದರ್ಜೆ ಸಹಾಯಕರು, ದ್ವಿತೀಯ ದರ್ಜೆ ಸಹಾಯಕರು, ಶೀಘ್ರಲಿಪಿಗಾರರು, ಹಿರಿಯ ಬೆರಳಚ್ಚುಗಾರರು, ಬೆರಳಚ್ಚುಗಾರರು, ಕಿರಿಯ ಪರಿವೀಕ್ಷಕರು, ಕಿರಿಯ ಲೆಕ್ಕಪರಿಶೋಧಕರು, ಹಿರಿಯ ವಾಹನ ಚಾಲಕರು, ವಾಹನ ಚಾಲಕರು | ರಿಜಿಸ್ಟ್ರಾರ್ | ಸಹಕಾರ ಸಂಘಗಳ ಉಪ ರಿಜಿಸ್ಟ್ರಾರ್ | (ii)ರಿಂದ (ivಎ) | ರಿಜಿಸ್ಟ್ರಾರ್ |
| | | ರಿಜಿಸ್ಟ್ರಾರ್ | (v)ರಿಂದ (viii) | ಸರ್ಕಾರ |
| **ಉಪ ವಿಭಾಗೀಯ ಸಹಾಯಕ ರಿಜಿಸ್ಟ್ರಾರರ ಮತ್ತು ಇತರ ಅಧೀನ ಅಧಿಕಾರಿಗಳ ಕಚೇರಿ:** | | | | |
| ಅಧೀಕ್ಷಕರು, ಮುಖ್ಯ ಗುಮಾಸ್ತರು, ಸಹಕಾರ ಸಂಘಗಳ ಹಿರಿಯ ಪರಿವೀಕ್ಷಕರು, ಸಹಕಾರ ಸಂಘಗಳ ಪರಿವೀಕ್ಷಕರು, ತಾಲೂಕು ಪಂಚಾಯತಿ ಕಚೇರಿಯಲ್ಲಿರುವ ಸಹಕಾರ ವಿಸ್ತರಣಾಧಿಕಾರಿಗಳು | ರಿಜಿಸ್ಟ್ರಾರ್ | ಸಹಕಾರ ಸಂಘಗಳ ಉಪ ರಿಜಿಸ್ಟ್ರಾರ್ | (ii)ರಿಂದ (ivಎ) | ರಿಜಿಸ್ಟ್ರಾರ್ |
| | | ರಿಜಿಸ್ಟ್ರಾರ್ | (v)ರಿಂದ (viii) | ಸರ್ಕಾರ |
| ಪ್ರಥಮ ದರ್ಜೆ ಸಹಾಯಕರು, ದ್ವಿತೀಯ ದರ್ಜೆ ಸಹಾಯಕರು, ಹಿರಿಯ ಬೆರಳಚ್ಚುಗಾರರು, ಬೆರಳಚ್ಚುಗಾರರು, ಹಿರಿಯ ವಾಹನ ಚಾಲಕರು, ವಾಹನ ಚಾಲಕರು, ಕಿರಿಯ ಪರಿವೀಕ್ಷಕರು | ರಿಜಿಸ್ಟ್ರಾರ್ | ಸಹಾಯಕ ರಿಜಿಸ್ಟ್ರಾರ್ | (ii)ರಿಂದ (ivಎ) | ರಿಜಿಸ್ಟ್ರಾರ್ |
| | | ರಿಜಿಸ್ಟ್ರಾರ್ | (v)ರಿಂದ (viii) | ಸರ್ಕಾರ |
| ಈ ಅನುಸೂಚಿಯ ವ್ಯಾಪ್ತಿಗೆ ಒಳಪಡದ ಎಲ್ಲಾ ಇತರ ಸಿ ಸಮೂಹದ ಹುದ್ದೆಗಳು | ರಿಜಿಸ್ಟ್ರಾರ್ | ರಿಜಿಸ್ಟ್ರಾರ್ | (ii)ರಿಂದ (viii) | ಸರ್ಕಾರ |

**3. ಅನುಸೂಚಿ IIIರ ತಿದ್ದುಪಡಿ.–** ಸದರಿ ನಿಯಮಗಳ ಅನುಸೂಚಿ III ರಲ್ಲಿ "ಸಹಕಾರ ಇಲಾಖೆ" ಶೀರ್ಷಿಕೆ ಅಡಿಯಲ್ಲಿ ಇರುವ ನಮೂದುಗಳಿಗೆ ಬದಲಾಗಿ ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

**ಸಹಕಾರ ಸಂಘಗಳ ರಿಜಿಸ್ಟ್ರಾರರ ಕಚೇರಿ, ಕರ್ನಾಟಕ, ಬೆಂಗಳೂರು :**

| | | | | |
|---|---|---|---|---|
| ಪ್ರೋಸೆಸ್ ಸರ್ವರ್‌ಗಳು, ಅಟೆಂಡರ್‌ಗಳು, 'ಡಿ' ಸಮೂಹದ ಹುದ್ದೆಗಳು | ರಿಜಿಸ್ಟ್ರಾರ್ | ಸಹಕಾರ ಸಂಘಗಳ ರಿಜಿಸ್ಟ್ರಾರರ ಗೆಜೆಟೆಡ್ ಆಪ್ತ ಸಹಾಯಕರು/ ಸಹಕಾರ ಸಂಘಗಳ ಉಪ ರಿಜಿಸ್ಟ್ರಾರ್ (ಆಡಳಿತ ಮತ್ತು ಪರಿವೀಕ್ಷಣೆ) | (i)ರಿಂದ (ivಎ) | ಸಹಕಾರ ಸಂಘಗಳ ಹೆಚ್ಚುವರಿ ರಿಜಿಸ್ಟ್ರಾರ್/ ಸಹಕಾರ ಸಂಘಗಳ ಜಂಟಿ ರಿಜಿಸ್ಟ್ರಾರ್ (ಆಡಳಿತ ಮತ್ತು ಪರಿವೀಕ್ಷಣೆ) |
| | | ರಿಜಿಸ್ಟ್ರಾರ್ | (v)ರಿಂದ(viii) | ಸರ್ಕಾರ |

**ಸಹಕಾರ ಸಂಘಗಳ ಪ್ರಾದೇಶಿಕ ಜಂಟಿ ರಿಜಿಸ್ಟ್ರಾರರ ಕಚೇರಿ:**

| | | | | |
|---|---|---|---|---|
| ಪ್ರೊಸೆಸ್ ಸರ್ವರ್‌ಗಳು, ಅಟೆಂಡರ್‌ಗಳು, 'ಡಿ' ಸಮೂಹದ ಹುದ್ದೆಗಳು | ರಿಜಿಸ್ಟ್ರಾರ್ | ಸಹಕಾರ ಸಂಘಗಳ ಹೆಚ್ಚುವರಿ ರಿಜಿಸ್ಟ್ರಾರ್/ ಸಹಕಾರ ಸಂಘಗಳ ಜಂಟಿ ರಿಜಿಸ್ಟ್ರಾರ್ (ಆಡಳಿತ ಮತ್ತು ಅಭಿವೃದ್ಧಿ)<br>ರಿಜಿಸ್ಟ್ರಾರರು | (ii)ರಿಂದ (ivಎ)<br>(v)ರಿಂದ (viii) | ರಿಜಿಸ್ಟ್ರಾರ್<br>ಸರ್ಕಾರ |

**ಸಹಕಾರ ಸಂಘಗಳ ಜಿಲ್ಲಾ ಉಪ ರಿಜಿಸ್ಟ್ರಾರರ ಕಚೇರಿ :**

| | | | | |
|---|---|---|---|---|
| ಪ್ರೋಸೆಸ್ ಸರ್ವರ್‌ಗಳು, ಅಟೆಂಡರ್‌ಗಳು, 'ಡಿ' ಸಮೂಹದ ಹುದ್ದೆಗಳು | ಸಹಕಾರ ಸಂಘಗಳ ಉಪ ರಿಜಿಸ್ಟ್ರಾರ್ | ಸಹಕಾರ ಸಂಘಗಳ ಉಪರಿಜಿಸ್ಟ್ರಾರ್ | (i) ರಿಂದ (viii) | ರಿಜಿಸ್ಟ್ರಾರ್ |

**ಸಹಕಾರ ಸಂಘಗಳ ಉಪ–ವಿಭಾಗೀಯ ರಿಜಿಸ್ಟ್ರಾರರ ಕಚೇರಿ ಮತ್ತು ಎಲ್ಲಾ ಇತರ ಅಧೀನ ಅಧಿಕಾರಿಗಳ ಕಚೇರಿಗಳು:**

| | | | | |
|---|---|---|---|---|
| ಪ್ರೋಸೆಸ್ ಸರ್ವರ್‌ಗಳು, ಅಟೆಂಡರ್‌ಗಳು, 'ಡಿ' ಸಮೂಹದ ಹುದ್ದೆಗಳು | ಸಹಕಾರ ಸಂಘಗಳ ಉಪ ರಿಜಿಸ್ಟ್ರಾರ್ | ಸಹಕಾರ ಸಂಘಗಳ ಸಹಾಯಕ ರಿಜಿಸ್ಟ್ರಾರ್ | (i) ರಿಂದ (ivಎ) | ಸಹಕಾರ ಸಂಘಗಳ ಉಪ ರಿಜಿಸ್ಟ್ರಾರ್ |
| | | ಸಹಕಾರ ಸಂಘಗಳ ಉಪರಿಜಿಸ್ಟ್ರಾರ್ | (v) ರಿಂದ (viii) | ರಿಜಿಸ್ಟ್ರಾರ್ |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು
ಅವರ ಹೆಸರಿನಲ್ಲಿ,
**ಕೆ. ರಘುರಾಮ್ ಭಂಡಾರಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ, (ಸೇವಾ ನಿಯಮಗಳು –2).

**ಕರ್ನಾಟಕ ಸರ್ಕಾರ**

ಸಂಖ್ಯೆ. ಡಿಪಿಎಆರ್ 3 ಎಸ್‌ಡಿಇ 2004

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಧಾನಸೌಧ,
ಬೆಂಗಳೂರು, ದಿನಾಂಕ 11.11.2005

**ಅಧಿಸೂಚನೆ**

ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು, 1957ನ್ನು ಮತ್ತಷ್ಟು ತಿದ್ದುಪಡಿ ಮಾಡಲು ಈ ಮುಂದಿನ ನಿಯಮಗಳ ಕರಡನ್ನು, ಅದರಿಂದ ಬಾಧಿತರಾಗುವ ಸಂಭವವಿರುವ ಎಲ್ಲಾ ವ್ಯಕ್ತಿಗಳಿಂದ, ಸರ್ಕಾರಿ ರಾಜ್ಯಪತ್ರದಲ್ಲಿ ಅದನ್ನು ಪ್ರಕಟಿಸಿದ ದಿನಾಂಕದಿಂದ 15 ದಿನಗಳೊಳಗಾಗಿ ಆಕ್ಷೇಪಣೆಗಳನ್ನು ಮತ್ತು ಸಲಹೆಗಳನ್ನು ಆಹ್ವಾನಿಸಿ, ಕರ್ನಾಟಕ ರಾಜ್ಯ ಸಿವಿಲ್ ಸೇವಾ ಅಧಿನಿಯಮ, 1978 (ಕರ್ನಾಟಕ ಅಧಿನಿಯಮ 1990ರ 14)ರ 3ನೇ ಪ್ರಕರಣದ (2)ನೇ ಉಪಪ್ರಕರಣದ (ಎ) ಖಂಡದ ಮೂಲಕ ಅಗತ್ಯಪಡಿಸಲಾದಂತೆ, ದಿನಾಂಕ 20ನೇ ಸೆಪ್ಟೆಂಬರ್ 2005ರ ಕರ್ನಾಟಕ ವಿಶೇಷ ರಾಜ್ಯಪತ್ರದ ಭಾಗ–IVಎ (ಪಿ.ಆರ್. ಸಂಖ್ಯೆ. 1740) ರಲ್ಲಿ ಅಧಿಸೂಚನೆ ಸಂಖ್ಯೆ ಡಿಪಿಎಆರ್ 3 ಎಸ್‌ಡಿಇ 2004, ದಿನಾಂಕ 19ನೇ ಸೆಪ್ಟೆಂಬರ್ 2005 ರಲ್ಲಿ ಪ್ರಕಟಿಸಿರುವುದರಿಂದ;

ಸದರಿ ರಾಜ್ಯಪತ್ರವನ್ನು 20.9.2005 ರಂದು ಸಾರ್ವಜನಿಕರಿಗೆ ಲಭ್ಯವಾಗುವಂತೆ ಮಾಡಿರುವುದರಿಂದ;

ಮತ್ತು ಈ ಬಗ್ಗೆ ರಾಜ್ಯ ಸರ್ಕಾರಕ್ಕೆ ಯಾವ ಆಕ್ಷೇಪಣೆಗಳೂ ಮತ್ತು ಸಲಹೆಗಳೂ ಬಾರದಿರುವುದರಿಂದ;

ಈಗ, ಕರ್ನಾಟಕ ರಾಜ್ಯ ಸಿವಿಲ್ ಸೇವಾ ಅಧಿನಿಯಮ, 1978 (1990ರ ಕರ್ನಾಟಕ ಅಧಿನಿಯಮ ಸಂಖ್ಯೆ 14)ರ 8ನೇ ಪ್ರಕರಣದೊಂದಿಗೆ ಓದಿಕೊಂಡ 3ನೇ ಪ್ರಕರಣದ (1)ನೇ ಉಪಪ್ರಕರಣದಿಂದ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಈ ಮೂಲಕ ಈ ಮುಂದಿನ ನಿಯಮಗಳನ್ನು ರಚಿಸುತ್ತದೆ, ಎಂದರೆ:–

**1. ಹೆಸರು ಮತ್ತು ಪ್ರಾರಂಭ.**– (1) ಈ ನಿಯಮಗಳನ್ನು ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು, 2005 ಎಂದು ಕರೆಯತಕ್ಕದ್ದು.

(2) ಇವು ರಾಜ್ಯಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ ಜಾರಿಗೆ ಬರತಕ್ಕದ್ದು.

**2. ಅನುಸೂಚಿ IIರ ತಿದ್ದುಪಡಿ.**– (1) ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು, 1957 (ಇಲ್ಲಿ ಇನ್ನು ಮುಂದೆ ಸದರಿ ನಿಯಮಗಳೆಂದು ಉಲ್ಲೇಖಿಸಲಾಗಿದೆ)ರ ಅನುಸೂಚಿ II ರಲ್ಲಿ "ಕಾರಾಗೃಹಗಳ ಇಲಾಖೆ" ಎಂಬ ಶೀರ್ಷಿಕೆ ಅಡಿಯಲ್ಲಿ ಇರುವ ನಮೂದುಗಳಿಗೆ ಬದಲಾಗಿ (1) ರಿಂದ (5)ರ ವರೆಗಿನ ಅಂಕಣಗಳ ಅಡಿಯಲ್ಲಿ ಈ ಮುಂದಿನ ನಮೂದುಗಳನ್ನು ಸೇರಿಸತಕ್ಕದ್ದು, ಎಂದರೆ:–

**ಕಾರಾಗೃಹಗಳ ಇಲಾಖೆ**

**I. ಕಾರಾಗೃಹಗಳ ಇನ್ಸ್‌ಪೆಕ್ಟರ್ ಜನರಲ್‌ರವರ ಕಚೇರಿ:**

| | | | | |
|---|---|---|---|---|
| (ಎ) ಕಚೇರಿ ಅಧೀಕ್ಷಕರು, ಪ್ರಥಮ ದರ್ಜೆ ಸಹಾಯಕ, ಶೀಘ್ರಲಿಪಿಗಾರ, ಹಿರಿಯ ವಾಹನ ಚಾಲಕ ಮತ್ತು ಹಿರಿಯ ಬೆರಳಚ್ಚುಗಾರ, ದ್ವಿತೀಯ ದರ್ಜೆ ಸಹಾಯಕ, ಬೆರಳಚ್ಚುಗಾರ, ವಾಹನ ಚಾಲಕ ಮತ್ತು ಮೋಟಾರು ಸೈಕಲ್ ಟಪಾಲು ಆರ್ಡರ್ಲೀ | ಕಾರಾಗೃಹಗಳ ಇನ್ಸ್‌ಪೆಕ್ಟರ್ ಜನರಲ್ | ಕಾರಾಗೃಹಗಳ ಡೆಪ್ಯುಟಿ ಇನ್ಸ್‌ಪೆಕ್ಟರ್ ಜನರಲ್<br>ಕಾರಾಗೃಹಗಳ ಇನ್ಸ್‌ಪೆಕ್ಟರ್ ಜನರಲ್ | (ii) ರಿಂದ (ivಎ)<br>(v) ರಿಂದ (viii) | ಕಾರಾಗೃಹಗಳ ಇನ್ಸ್‌ಪೆಕ್ಟರ್ ಜನರಲ್<br>ಸರ್ಕಾರ |
| **II. ಕೇಂದ್ರ ಕಾರಾಗೃಹಗಳ ಮುಖ್ಯ ಅಧೀಕ್ಷಕರ/ ಕೇಂದ್ರ ಕಾರಾಗೃಹಗಳ ಅಧೀಕ್ಷಕರ ಕಚೇರಿ/ ಬೋರ್ಸ್ಟಲ್ ಶಾಲೆ, ಧಾರವಾಡ/ ಕಾರಾಗೃಹ ತರಬೇತಿ ಸಂಸ್ಥೆ, ಮೈಸೂರು** | | | | |
| (ಎ) ಮುಖ್ಯ ಜೈಲರ್, ಜೈಲರ್, ಮುಖ್ಯ ವಾರ್ಡರ್, ಕಚೇರಿ ಅಧೀಕ್ಷಕರು, ಪ್ರಥಮ ದರ್ಜೆ ಸಹಾಯಕ, ಮುಖ್ಯ ಬೋಧಕರು, ಬೋಧಕ ದರ್ಜೆ I, ಹಿರಿಯ ಬೆರಳಚ್ಚುಗಾರ, ಹಿರಿಯ ವಾಹನ ಚಾಲಕ, ಶೀಘ್ರಲಿಪಿಗಾರ, ಹೆಡ್ ವಾರ್ಡರ್ | ಕಾರಾಗೃಹಗಳ ಇನ್ಸ್‌ಪೆಕ್ಟರ್ ಜನರಲ್ | ಮುಖ್ಯ ಅಧೀಕ್ಷಕರು, ಪ್ರಾಂಶುಪಾಲರು, ಕಾರಾಗೃಹ ತರಬೇತಿ ಸಂಸ್ಥೆ<br>ಕಾರಾಗೃಹಗಳ ಇನ್ಸ್‌ಪೆಕ್ಟರ್ ಜನರಲ್ | (ii) ರಿಂದ (ivಎ)<br>(v) ರಿಂದ (viii) | ಕಾರಾಗೃಹಗಳ ಡೆಪ್ಯುಟಿ ಇನ್ಸ್‌ಪೆಕ್ಟರ್ ಜನರಲ್<br>ಸರ್ಕಾರ |
| (ಬಿ) ವಾರ್ಡರ್, ದ್ವಿತೀಯ ದರ್ಜೆ ಸಹಾಯಕ, ಬೆರಳಚ್ಚುಗಾರ, ಬೋಧಕ ದರ್ಜೆ II, ಎಲೆಕ್ಟ್ರೀಷಿಯನ್, ವಾಹನ ಚಾಲಕ, ನರ್ಸಿಂಗ್ ಆರ್ಡರ್ಲೀ, ಮೆಕಾನಿಕ್ | ಅಧೀಕ್ಷಕರು/ ಮುಖ್ಯ ಅಧೀಕ್ಷಕರು | ಸಹಾಯಕ ಅಧೀಕ್ಷಕರು<br>ಅಧೀಕ್ಷಕರು/ ಮುಖ್ಯ ಅಧೀಕ್ಷಕರು | (ii) ರಿಂದ (ivಎ)<br>(v) ರಿಂದ (viii) | ಕಾರಾಗೃಹಗಳ ಡೆಪ್ಯುಟಿ ಇನ್ಸ್‌ಪೆಕ್ಟರ್ ಜನರಲ್<br>ಕಾರಾಗೃಹಗಳ ಇನ್ಸ್‌ಪೆಕ್ಟರ್ ಜನರಲ್ |
| (ಸಿ) ಮೇಟ್ರನ್/ ಮೇಲ್ ನರ್ಸ್ (ಪ್ರತಿನಿಯೋಜನೆ ಮೇಲೆ) | ಮಾತೃ ಇಲಾಖೆಯಲ್ಲಿರುವ ನೇಮಕ ಪ್ರಾಧಿಕಾರಿ | ಅಧೀಕ್ಷಕರು/ ಮುಖ್ಯ ಅಧೀಕ್ಷಕರು<br>ಮಾತೃ ಇಲಾಖೆಯಲ್ಲಿರುವ ನೇಮಕ ಪ್ರಾಧಿಕಾರಿ | (ii) ರಿಂದ (ivಎ)<br>(v) ರಿಂದ (viii) | ಕಾರಾಗೃಹಗಳ ಇನ್ಸ್‌ಪೆಕ್ಟರ್ ಜನರಲ್<br>ಮಾತೃ ಇಲಾಖೆಯಲ್ಲಿರುವ ಅಪೀಲು ಪ್ರಾಧಿಕಾರಿ |
| (ಡಿ) ಫಾರ್ಮಾಸಿಸ್ಟರು, ಕಿರಿಯ ಪ್ರಯೋಗಾಲಯ ತಂತ್ರಜ್ಞ (ಪ್ರತಿನಿಯೋಜನೆಯ ಮೇಲೆ) | ಮಾತೃ ಇಲಾಖೆಯಲ್ಲಿರುವ ನೇಮಕ ಪ್ರಾಧಿಕಾರಿ | ಅಧೀಕ್ಷಕರು/ ಮುಖ್ಯ ಅಧೀಕ್ಷಕರು<br>ಮಾತೃ ಇಲಾಖೆಯಲ್ಲಿರುವ ನೇಮಕ ಪ್ರಾಧಿಕಾರಿ | (ii) ರಿಂದ (ivಎ)<br>(v) ರಿಂದ (viii) | ಕಾರಾಗೃಹಗಳ ಇನ್ಸ್‌ಪೆಕ್ಟರ್ ಜನರಲ್<br>ಮಾತೃ ಇಲಾಖೆಯಲ್ಲಿರುವ ಅಪೀಲು ಪ್ರಾಧಿಕಾರಿ |

| | | | | |
|---|---|---|---|---|
| (ಇ) ಪ್ರೆಸ್ ಫೋರ್‌ಮನ್, ದ್ವಿತೀಯ ದರ್ಜೆ ಸಹಾಯಕ (ಮುದ್ರಣ) (ಪ್ರತಿನಿಯೋಜನೆ ಮೇಲೆ) | ಮಾತೃ ಇಲಾಖೆಯಲ್ಲಿರುವ ನೇಮಕ ಪ್ರಾಧಿಕಾರಿ | ಅಧೀಕ್ಷಕರು/ ಮುಖ್ಯ ಅಧೀಕ್ಷಕರು<br>ಮಾತೃ ಇಲಾಖೆಯಲ್ಲಿರುವ ನೇಮಕ ಪ್ರಾಧಿಕಾರಿ | (ii) ರಿಂದ (ivಎ)<br>(v) ರಿಂದ (viii) | ಕಾರಾಗೃಹಗಳ ಇನ್ಸ್‌ಪೆಕ್ಟರ್ ಜನರಲ್<br>ಮಾತೃ ಇಲಾಖೆಯಲ್ಲಿರುವ ಅಪೀಲು ಪ್ರಾಧಿಕಾರಿ |
| (ಎಫ್) ಸಹಾಯಕ ಫೋರ್‌ಮನ್, ಕಂಪೋಸಿಟರ್, ಮಶಿನ್ ಮೈಂಡರ್ (ಪ್ರತಿನಿಯೋಜನೆಯ ಮೇಲೆ) | ಮಾತೃ ಇಲಾಖೆಯಲ್ಲಿರುವ ನೇಮಕ ಪ್ರಾಧಿಕಾರಿ | ಅಧೀಕ್ಷಕರು/ ಮುಖ್ಯ ಅಧೀಕ್ಷಕರು<br>ಮಾತೃ ಇಲಾಖೆಯಲ್ಲಿರುವ ನೇಮಕ ಪ್ರಾಧಿಕಾರಿ | (ii) ರಿಂದ (ivಎ)<br>(v) ರಿಂದ (viii) | ಕಾರಾಗೃಹಗಳ ಇನ್ಸ್‌ಪೆಕ್ಟರ್ ಜನರಲ್<br>ಮಾತೃ ಇಲಾಖೆಯಲ್ಲಿರುವ ಅಪೀಲು ಪ್ರಾಧಿಕಾರಿ |

| | | | | |
|---|---|---|---|---|
| (ಜಿ) ಕೃಷಿ ಬೋಧಕರು (ಪ್ರತಿನಿಯೋಜನೆ ಮೇಲೆ) | ಮಾತೃ ಇಲಾಖೆಯಲ್ಲಿರುವ ನೇಮಕ ಪ್ರಾಧಿಕಾರಿ | ಅಧೀಕ್ಷಕರು/ ಮುಖ್ಯ ಅಧೀಕ್ಷಕರು | (ii) ರಿಂದ (ivಎ) | ಕಾರಾಗೃಹಗಳ ಇನ್ಸ್‌ಪೆಕ್ಟರ್ ಜನರಲ್ |
| | | ಮಾತೃ ಇಲಾಖೆಯಲ್ಲಿರುವ ನೇಮಕ ಪ್ರಾಧಿಕಾರಿ | (v) ರಿಂದ (viii) | ಮಾತೃ ಇಲಾಖೆಯಲ್ಲಿರುವ ಅಪೀಲು ಪ್ರಾಧಿಕಾರಿ |
| (ಹೆಚ್) ಪಶು ವೈದ್ಯಕೀಯ ಹಾಗೂ ಜಾನುವಾರು ಪರಿವೀಕ್ಷಕರು (ಪ್ರತಿನಿಯೋಜನೆ ಮೇಲೆ) | ಮಾತೃ ಇಲಾಖೆಯಲ್ಲಿರುವ ನೇಮಕ ಪ್ರಾಧಿಕಾರಿ | ಅಧೀಕ್ಷಕರು/ ಮುಖ್ಯ ಅಧೀಕ್ಷಕರು | (ii) ರಿಂದ (ivಎ) | ಕಾರಾಗೃಹಗಳ ಇನ್ಸ್‌ಪೆಕ್ಟರ್ ಜನರಲ್ |
| | | ಮಾತೃ ಇಲಾಖೆಯಲ್ಲಿರುವ ನೇಮಕ ಪ್ರಾಧಿಕಾರಿ | (v) ರಿಂದ (viii) | ಮಾತೃ ಇಲಾಖೆಯಲ್ಲಿರುವ ಅಪೀಲು ಪ್ರಾಧಿಕಾರಿ |
| (ಐ) ಶಿಕ್ಷಕರು (ಪ್ರತಿನಿಯೋಜನೆ ಮೇಲೆ) | ಮಾತೃ ಇಲಾಖೆಯಲ್ಲಿರುವ ನೇಮಕ ಪ್ರಾಧಿಕಾರಿ | ಅಧೀಕ್ಷಕರು/ ಮುಖ್ಯ ಅಧೀಕ್ಷಕರು | (ii) ರಿಂದ (ivಎ) | ಕಾರಾಗೃಹಗಳ ಇನ್ಸ್‌ಪೆಕ್ಟರ್ ಜನರಲ್ |
| | | ಮಾತೃ ಇಲಾಖೆಯಲ್ಲಿರುವ ನೇಮಕ ಪ್ರಾಧಿಕಾರಿ | (v) ರಿಂದ (viii) | ಮಾತೃ ಇಲಾಖೆಯಲ್ಲಿರುವ ಅಪೀಲು ಪ್ರಾಧಿಕಾರಿ |

| | | | | |
|---|---|---|---|---|
| (ಜೆ) ಡ್ರಾಯಿಂಗ್ ಶಿಕ್ಷಕರು (ಪ್ರತಿನಿಯೋಜನೆ ಮೇಲೆ) | ಮಾತೃ ಇಲಾಖೆಯಲ್ಲಿರುವ ನೇಮಕ ಪ್ರಾಧಿಕಾರಿ | ಅಧೀಕ್ಷಕರು/ ಮುಖ್ಯ ಅಧೀಕ್ಷಕರು | (ii) ರಿಂದ (ivಎ) | ಕಾರಾಗೃಹಗಳ ಇನ್ಸ್‌ಪೆಕ್ಟರ್ ಜನರಲ್ |
| | | ಮಾತೃ ಇಲಾಖೆಯಲ್ಲಿರುವ ನೇಮಕ ಪ್ರಾಧಿಕಾರಿ | (v) ರಿಂದ (viii) | ಮಾತೃ ಇಲಾಖೆಯಲ್ಲಿರುವ ಅಪೀಲು ಪ್ರಾಧಿಕಾರಿ |
| (ಕೆ) ಆಯುಧ ಮತ್ತು ದೈಹಿಕ ತರಬೇತಿ ಬೋಧಕರು (ಪ್ರತಿನಿಯೋಜನೆ ಮೇಲೆ) | ಮಾತೃ ಇಲಾಖೆಯಲ್ಲಿರುವ ನೇಮಕ ಪ್ರಾಧಿಕಾರಿ | ಪ್ರಾಂಶುಪಾಲರು, ಕಾರಾಗೃಹ ತರಬೇತಿ ಸಂಸ್ಥೆ, ಮೈಸೂರು | (ii) ರಿಂದ (ivಎ) | ಕಾರಾಗೃಹಗಳ ಇನ್ಸ್‌ಪೆಕ್ಟರ್ ಜನರಲ್ |
| | | ಮಾತೃ ಇಲಾಖೆಯಲ್ಲಿರುವ ನೇಮಕ ಪ್ರಾಧಿಕಾರಿ | (v) ರಿಂದ (viii) | ಮಾತೃ ಇಲಾಖೆಯಲ್ಲಿರುವ ಅಪೀಲು ಪ್ರಾಧಿಕಾರಿ |
| (ಎಲ್) ಕವಾಯತು ಬೋಧಕರು (ಪ್ರತಿನಿಯೋಜನೆ ಮೇಲೆ) | ಮಾತೃ ಇಲಾಖೆಯಲ್ಲಿರುವ ನೇಮಕ ಪ್ರಾಧಿಕಾರಿ | ಪ್ರಾಂಶುಪಾಲರು, ಕಾರಾಗೃಹ ತರಬೇತಿ ಸಂಸ್ಥೆ, ಮೈಸೂರು | (ii) ರಿಂದ (ivಎ) | ಕಾರಾಗೃಹಗಳ ಇನ್ಸ್‌ಪೆಕ್ಟರ್ ಜನರಲ್ |
| | | ಮಾತೃ ಇಲಾಖೆಯಲ್ಲಿರುವ ನೇಮಕ ಪ್ರಾಧಿಕಾರಿ | (v) ರಿಂದ (viii) | ಮಾತೃ ಇಲಾಖೆಯಲ್ಲಿರುವ ಅಪೀಲು ಪ್ರಾಧಿಕಾರಿ |
| **III. ಜಿಲ್ಲಾ ಕಾರಾಗೃಹಗಳ / ಜಿಲ್ಲಾ ಕೇಂದ್ರ ಕಾರ್ಯಸ್ಥಾನಗಳ, ಉಪ ಜೈಲುಗಳ ಮತ್ತು ಕೋರಮಂಗಲ ಬಯಲು ಬಂದೀಖಾನೆ ಅಧೀಕ್ಷಕರ ಕಚೇರಿ:** | | | | |
| (ಎ) ಮುಖ್ಯ ಜೈಲರ್, ಜೈಲರ್, ಮುಖ್ಯ ವಾರ್ಡರ್, ಪ್ರಥಮ ದರ್ಜೆ ಸಹಾಯಕ, ಹಿರಿಯ ಬೆರಳಚ್ಚುಗಾರ, ಹಿರಿಯ ವಾಹನ ಚಾಲಕ, ಹೆಡ್ ವಾರ್ಡರ್ | ಕಾರಾಗೃಹಗಳ ಇನ್ಸ್‌ಪೆಕ್ಟರ್ ಜನರಲ್ | ಕಾರಾಗೃಹಗಳ ಡೆಪ್ಯುಟಿ ಇನ್ಸ್‌ಪೆಕ್ಟರ್ ಜನರಲ್/ ಅಧೀಕ್ಷಕರು | (ii) ರಿಂದ (ivಎ) | ಕಾರಾಗೃಹಗಳ ಇನ್ಸ್‌ಪೆಕ್ಟರ್ ಜನರಲ್ |
| | | ಕಾರಾಗೃಹಗಳ ಇನ್ಸ್‌ಪೆಕ್ಟರ್ ಜನರಲ್ | (v) ರಿಂದ (viii) | ಸರ್ಕಾರ |
| (ಬಿ) ವಾರ್ಡರ್, ದ್ವಿತೀಯ ದರ್ಜೆ ಸಹಾಯಕ, ಬೆರಳಚ್ಚುಗಾರ, ವಾಹನ ಚಾಲಕ | ಅಧೀಕ್ಷಕರು/ ಮುಖ್ಯ ಅಧೀಕ್ಷಕರು | ಸಹಾಯಕ ಅಧೀಕ್ಷಕರು | (ii) ರಿಂದ (ivಎ) | ಕಾರಾಗೃಹಗಳ ಡೆಪ್ಯುಟಿ ಇನ್ಸ್‌ಪೆಕ್ಟರ್ ಜನರಲ್ |
| | | ಅಧೀಕ್ಷಕರು/ ಮುಖ್ಯ ಅಧೀಕ್ಷಕರು | (v) ರಿಂದ (viii) | ಕಾರಾಗೃಹಗಳ ಇನ್ಸ್‌ಪೆಕ್ಟರ್ ಜನರಲ್ |
| (ಸಿ) ಕೃಷಿ ಬೋಧಕರು (ಪ್ರತಿನಿಯೋಜನೆ ಮೇಲೆ) | ಮಾತೃ ಇಲಾಖೆಯಲ್ಲಿರುವ ನೇಮಕ ಪ್ರಾಧಿಕಾರಿ | ಅಧೀಕ್ಷಕರು | (ii) ರಿಂದ (ivಎ) | ಕಾರಾಗೃಹಗಳ ಇನ್ಸ್‌ಪೆಕ್ಟರ್ ಜನರಲ್ |
| | | ಮಾತೃ ಇಲಾಖೆಯಲ್ಲಿರುವ ನೇಮಕ ಪ್ರಾಧಿಕಾರಿ | (v) ರಿಂದ (viii) | ಮಾತೃ ಇಲಾಖೆಯಲ್ಲಿರುವ ಅಪೀಲು ಪ್ರಾಧಿಕಾರಿ |

| | | | | |
|---|---|---|---|---|
| (ಡಿ) ಫಾರ್ಮಾಸಿಸ್ಟ್ (ಪ್ರತಿನಿಯೋಜನೆ ಮೇಲೆ) | ಮಾತೃ ಇಲಾಖೆಯಲ್ಲಿರುವ ನೇಮಕ ಪ್ರಾಧಿಕಾರಿ | ಅಧೀಕ್ಷಕರು | (ii) ರಿಂದ (ivಎ) | ಕಾರಾಗೃಹಗಳ ಇನ್ಸ್‌ಪೆಕ್ಟರ್ ಜನರಲ್ |
| | | ಮಾತೃ ಇಲಾಖೆಯಲ್ಲಿರುವ ನೇಮಕ ಪ್ರಾಧಿಕಾರಿ | (v) ರಿಂದ (viii) | ಮಾತೃ ಇಲಾಖೆಯಲ್ಲಿರುವ ಅಪೀಲು ಪ್ರಾಧಿಕಾರಿ |
| (ಇ) ಶಿಕ್ಷಕರು (ಪ್ರತಿನಿಯೋಜನೆ ಮೇಲೆ) | ಮಾತೃ ಇಲಾಖೆಯಲ್ಲಿರುವ ನೇಮಕ ಪ್ರಾಧಿಕಾರಿ | ಅಧೀಕ್ಷಕರು | (ii) ರಿಂದ (ivಎ) | ಕಾರಾಗೃಹಗಳ ಇನ್ಸ್‌ಪೆಕ್ಟರ್ ಜನರಲ್ |
| | | ಮಾತೃ ಇಲಾಖೆಯಲ್ಲಿರುವ ನೇಮಕ ಪ್ರಾಧಿಕಾರಿ | (v) ರಿಂದ (viii) | ಮಾತೃ ಇಲಾಖೆಯಲ್ಲಿರುವ ಅಪೀಲು ಪ್ರಾಧಿಕಾರಿ |
| **IV. ವಿಶೇಷ ಉಪ ಜೈಲುಗಳ ಮತ್ತು ತಾಲೂಕು ಉಪಜೈಲುಗಳ ಅಧೀಕ್ಷಕರುಗಳ ಕಚೇರಿ:** | | | | |
| (ಎ) ಜೈಲರ್, ಮುಖ್ಯ ವಾರ್ಡರ್, ಪ್ರಥಮ ದರ್ಜೆ ಸಹಾಯಕ, ಹೆಡ್‌ವಾರ್ಡರ್ | ಕಾರಾಗೃಹಗಳ ಇನ್ಸ್‌ಪೆಕ್ಟರ್ ಜನರಲ್ | ಮುಖ್ಯ ಅಧೀಕ್ಷಕರು/ ಸಂಬಂಧಪಟ್ಟ ವಿಭಾಗದ ಕೇಂದ್ರ ಕಾರಾಗೃಹದ ಅಧೀಕ್ಷಕರು | (ii) ರಿಂದ (ivಎ) | ಕಾರಾಗೃಹಗಳ ಡೆಪ್ಯುಟಿ ಇನ್ಸ್‌ಪೆಕ್ಟರ್ ಜನರಲ್ |
| | | ಕಾರಾಗೃಹಗಳ ಇನ್ಸ್‌ಪೆಕ್ಟರ್ ಜನರಲ್ | (v) ರಿಂದ (viii) | ಸರ್ಕಾರ |
| (ಬಿ) ವಾರ್ಡರ್, ದ್ವಿತೀಯ ದರ್ಜೆ ಸಹಾಯಕ | ಮುಖ್ಯ ಅಧೀಕ್ಷಕರು/ ಸಂಬಂಧಪಟ್ಟ ವಿಭಾಗದ ಕೇಂದ್ರ ಕಾರಾಗೃಹದ ಅಧೀಕ್ಷಕರು | ಮುಖ್ಯ ಅಧೀಕ್ಷಕರು/ ಸಂಬಂಧಪಟ್ಟ ವಿಭಾಗದ ಕೇಂದ್ರ ಕಾರಾಗೃಹದ ಅಧೀಕ್ಷಕರು | (ii) ರಿಂದ (ivಎ) | ಕಾರಾಗೃಹಗಳ ಡೆಪ್ಯುಟಿ ಇನ್ಸ್‌ಪೆಕ್ಟರ್ ಜನರಲ್ |
| | | ಮುಖ್ಯ ಅಧೀಕ್ಷಕರು/ ಸಂಬಂಧಪಟ್ಟ ವಿಭಾಗದ ಕೇಂದ್ರ ಕಾರಾಗೃಹದ ಅಧೀಕ್ಷಕರು | (v) ರಿಂದ (viii) | ಕಾರಾಗೃಹಗಳ ಇನ್ಸ್‌ಪೆಕ್ಟರ್ ಜನರಲ್ |

(ii) "ಪ್ರಥಮ ದರ್ಜೆ ಗುಮಾಸ್ತರು" ಮತ್ತು "ದ್ವಿತೀಯ ದರ್ಜೆ ಗುಮಾಸ್ತರು" ಎಂಬ ಪದಗಳು ಬರುವ ಕಡೆಗಳಲ್ಲೆಲ್ಲಾ ಅವುಗಳ ಬದಲಾಗಿ "ಪ್ರಥಮ ದರ್ಜೆ ಸಹಾಯಕರು" ಮತ್ತು "ದ್ವಿತೀಯ ದರ್ಜೆ ಸಹಾಯಕರು" ಎಂಬ ಪದಗಳನ್ನು ಅನುಕ್ರಮವಾಗಿ ಸೇರಿಸತಕ್ಕದ್ದು.

**3. ಅನುಸೂಚಿ IIIರ ತಿದ್ದುಪಡಿ.–** ಸದರಿ ನಿಯಮಗಳ IIIನೇ ಅನುಸೂಚಿಯಲ್ಲಿ "ಕಾರಾಗೃಹ ಇಲಾಖೆ" ಶೀರ್ಷಿಕೆ ಅಡಿಯಲ್ಲಿ ಇರುವ ನಮೂದುಗಳಿಗೆ ಬದಲಾಗಿ (1) ರಿಂದ (5)ರ ವರೆಗಿನ ಅಂಕಣಗಳ ಅಡಿಯಲ್ಲಿ ಈ ಮುಂದಿನ ನಮೂದುಗಳನ್ನು ಸೇರಿಸತಕ್ಕದ್ದು, ಎಂದರೆ:–

**I. ಕಾರಾಗೃಹಗಳ ಇನ್ಸ್‌ಪೆಕ್ಟರ್ ಜನರಲ್‌ರವರ ಕಚೇರಿ :**

| | | | | |
|---|---|---|---|---|
| ಎಲ್ಲಾ 'ಡಿ' ಸಮೂಹದ ಹುದ್ದೆಗಳು | ಕಾರಾಗೃಹಗಳ ಡೆಪ್ಯುಟಿ ಇನ್ಸ್‌ಪೆಕ್ಟರ್ ಜನರಲ್ | ಸಂಶೋಧನೆ ಹಾಗೂ ಸಾಂಖ್ಯಿಕ ಅಧಿಕಾರಿ ಮತ್ತು ಗೆಜೆಟೆಡ್ ಮ್ಯಾನೇಜರ್ | (i) ರಿಂದ (iv ಎ) | ಕಾರಾಗೃಹಗಳ ಡೆಪ್ಯುಟಿ ಇನ್ಸ್‌ಪೆಕ್ಟರ್ ಜನರಲ್ |
| | | ಕಾರಾಗೃಹಗಳ ಡೆಪ್ಯುಟಿ ಇನ್ಸ್‌ಪೆಕ್ಟರ್ ಜನರಲ್ | (v) ರಿಂದ (viii) | ಕಾರಾಗೃಹಗಳ ಇನ್ಸ್‌ಪೆಕ್ಟರ್ ಜನರಲ್ |
| **II. ಕೇಂದ್ರ ಕಾರಾಗೃಹಗಳ/ ಬೋರ್ಸ್ಟಲ್ ಶಾಲೆಯ ಮತ್ತು ಮೈಸೂರಿನ ಕಾರಾಗೃಹಗಳ ತರಬೇತಿ ಸಂಸ್ಥೆಯ ಅಧೀಕ್ಷಕರ ಕಚೇರಿ** | | | | |
| ಎಲ್ಲಾ 'ಡಿ' ಸಮೂಹದ ಹುದ್ದೆಗಳು | ಅಧೀಕ್ಷಕರು/ ಮುಖ್ಯ ಅಧೀಕ್ಷಕರು | ಸಹಾಯಕ ಅಧೀಕ್ಷಕರು/ ಗೆಜೆಟೆಡ್ ಮ್ಯಾನೇಜರ್<br>ಅಧೀಕ್ಷಕರು/ ಮುಖ್ಯ ಅಧೀಕ್ಷಕರು | (i) ರಿಂದ (iv ಎ)<br>(v) ರಿಂದ (viii) | ಅಧೀಕ್ಷಕರು/ ಮುಖ್ಯ ಅಧೀಕ್ಷಕರು<br>ಕಾರಾಗೃಹಗಳ ಡೆಪ್ಯುಟಿ ಇನ್ಸ್‌ಪೆಕ್ಟರ್ ಜನರಲ್ |
| **III. ಜಿಲ್ಲಾ ಕಾರಾಗೃಹಗಳ/ ಜಿಲ್ಲಾ ಕೇಂದ್ರಗಳ ಉಪಜೈಲುಗಳ/ ಕೋರಮಂಗಲ ಬಯಲು ಬಂದೀಖಾನೆಯ ಅಧೀಕ್ಷಕರ ಕಚೇರಿ:** | | | | |
| ಎಲ್ಲಾ 'ಡಿ' ಸಮೂಹದ ಹುದ್ದೆಗಳು | ಸಹಾಯಕ ಅಧೀಕ್ಷಕರು | ಸಹಾಯಕ ಅಧೀಕ್ಷಕರು | (i) ರಿಂದ (viii) | ಕಾರಾಗೃಹಗಳ ಡೆಪ್ಯುಟಿ ಇನ್ಸ್‌ಪೆಕ್ಟರ್ ಜನರಲ್ |
| **IV. ವಿಶೇಷ ಉಪಜೈಲುಗಳ ಮತ್ತು ತಾಲೂಕು ಉಪಜೈಲುಗಳ ಅಧೀಕ್ಷಕರ ಕಚೇರಿ:** | | | | |
| ಎಲ್ಲಾ 'ಡಿ' ಸಮೂಹದ ಹುದ್ದೆಗಳು | ಮುಖ್ಯ ಅಧೀಕ್ಷಕರು/ ಸಂಬಂಧಿಸಿದ ವಿಭಾಗಗಳ ಕೇಂದ್ರ ಕಾರಾಗೃಹದ ಅಧೀಕ್ಷಕರು | ಉಪಜೈಲುಗಳ ಅಧೀಕ್ಷಕರು<br>ಮುಖ್ಯ ಅಧೀಕ್ಷಕರು/ ಸಂಬಂಧಿಸಿದ ವಿಭಾಗಗಳ ಕೇಂದ್ರ ಕಾರಾಗೃಹದ ಅಧೀಕ್ಷಕರು | (i) ರಿಂದ (ivಎ)<br>(v) ರಿಂದ (viii) | ಮುಖ್ಯ ಅಧೀಕ್ಷಕರು/ ಸಂಬಂಧಿಸಿದ ವಿಭಾಗಗಳ ಕೇಂದ್ರ ಕಾರಾಗೃಹದ ಅಧೀಕ್ಷಕರು<br>ಕಾರಾಗೃಹಗಳ ಡೆಪ್ಯುಟಿ ಇನ್ಸ್‌ಪೆಕ್ಟರ್ ಜನರಲ್][1] |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು
ಅವರ ಹೆಸರಿನಲ್ಲಿ,
**ಕೆ.ವಿ. ರಮಾ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ, (ಸೇವಾ ನಿಯಮಗಳು– 2).

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ಅಧಿಸೂಚನೆ**

ಸಂಖ್ಯೆ. ಡಿಪಿಎಆರ್ 16, ಎಸ್‌ಡಿಇ 2004, ಬೆಂಗಳೂರು, ದಿನಾಂಕ 17ನೇ ನವೆಂಬರ್ 2005

ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು, 1957ನ್ನು ಮತ್ತಷ್ಟು ತಿದ್ದುಪಡಿ ಮಾಡಲು ಈ ಮುಂದಿನ ನಿಯಮಗಳ ಕರಡನ್ನು, ಅದರಿಂದ ಬಾಧಿತರಾಗುವ ಸಂಭವವಿರುವ ಎಲ್ಲಾ ವ್ಯಕ್ತಿಗಳಿಂದ, ಸರ್ಕಾರಿ ರಾಜ್ಯಪತ್ರದಲ್ಲಿ ಅದನ್ನು ಪ್ರಕಟಿಸಿದ ದಿನಾಂಕದಿಂದ 15 ದಿನಗಳೊಳಗಾಗಿ ಆಕ್ಷೇಪಣೆಗಳನ್ನು ಮತ್ತು ಸಲಹೆಗಳನ್ನು ಆಹ್ವಾನಿಸಿ, ಕರ್ನಾಟಕ ರಾಜ್ಯ ಸಿವಿಲ್ ಸೇವಾ ಅಧಿನಿಯಮ, 1978 (ಕರ್ನಾಟಕ ಅಧಿನಿಯಮ 1990ರ 14)ರ 3ನೇ ಪ್ರಕರಣದ (2)ನೇ ಉಪಪ್ರಕರಣದ (ಎ) ಖಂಡದ ಮೂಲಕ ಅಗತ್ಯಪಡಿಸಲಾದಂತೆ, ದಿನಾಂಕ 20ನೇ ಅಕ್ಟೋಬರ್ 2005ರ ಕರ್ನಾಟಕ ವಿಶೇಷ ರಾಜ್ಯಪತ್ರದ ಭಾಗ–IVಎ (ಪಿ.ಆರ್. ಸಂಖ್ಯೆ. 1900) ರಲ್ಲಿ ಅಧಿಸೂಚನೆ ಸಂಖ್ಯೆ ಡಿಪಿಎಆರ್ 16 ಎಸ್‌ಡಿಇ 2004, ದಿನಾಂಕ 10ನೇ ಅಕ್ಟೋಬರ್, 2005 ರಲ್ಲಿ ಪ್ರಕಟಿಸಿರುವುದರಿಂದ;

ಸದರಿ ರಾಜ್ಯಪತ್ರವನ್ನು 20.10.2005 ರಂದು ಸಾರ್ವಜನಿಕರಿಗೆ ಲಭ್ಯವಾಗುವಂತೆ ಮಾಡಿರುವುದರಿಂದ;

ಮತ್ತು ಸದರಿ ಕರಡು ನಿಯಮಗಳ ಬಗ್ಗೆ ರಾಜ್ಯ ಸರ್ಕಾರಕ್ಕೆ ಯಾವ ಆಕ್ಷೇಪಣೆಗಳೂ ಮತ್ತು ಸಲಹೆಗಳೂ ಬಾರದಿರುವುದರಿಂದ;

ಈಗ, ಕರ್ನಾಟಕ ಸಿವಿಲ್ ಸೇವಾ ಅಧಿನಿಯಮ, 1978 (ಕರ್ನಾಟಕ ಅಧಿನಿಯಮ 1990ರ 14)ರ 8ನೇ ಪ್ರಕರಣದೊಂದಿಗೆ ಓದಿಕೊಂಡ 3ನೇ ಪ್ರಕರಣದ (1)ನೇ ಉಪಪ್ರಕರಣದಿಂದ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು, ಈ ಮೂಲಕ ಈ ಮುಂದಿನ ನಿಯಮಗಳನ್ನು ರಚಿಸುತ್ತದೆ. ಎಂದರೆ:–

**1. ಹೆಸರು ಮತ್ತು ಪ್ರಾರಂಭ.–** (1) ಈ ನಿಯಮಗಳನ್ನು ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) (19ನೇ ತಿದ್ದುಪಡಿ) ನಿಯಮಗಳು, 2005 ಎಂದು ಕರೆಯತಕ್ಕದ್ದು.

(2) ಅವು ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ ಜಾರಿಗೆ ಬರತಕ್ಕದ್ದು.

**2. 8ನೇ ನಿಯಮದ ತಿದ್ದುಪಡಿ.–** ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು, 1957ರ 8ನೇ ನಿಯಮದಲ್ಲಿ (iv)ನೇ ಖಂಡದ ತರುವಾಯ ಈ ಮುಂದಿನ ಸೂಚನೆಯನ್ನು ಸೇರಿಸತಕ್ಕದ್ದು, ಎಂದರೆ:–

**"ಸೂಚನೆ:–** "ಹಣಕಾಸಿನ ನಷ್ಟ" ಎಂದರೆ, ಸರ್ಕಾರಿ ನೌಕರನಿಂದ ಉಂಟಾದ ನಷ್ಟದ ಮೇಲೆ ಪ್ರತಿ ವರ್ಷಕ್ಕೆ ಶೇಕಡ ಎಂಟರಂತೆ ಅಂಥ ನಷ್ಟ ಉಂಟಾದ ದಿನಾಂಕದಿಂದ ಬಡ್ಡಿ ಮತ್ತು ಅದು ಆ ಬಡ್ಡಿಯನ್ನು ಒಳಗೊಳ್ಳತಕ್ಕದ್ದು."

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ವಿ. ರಮಾ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ, (ಸೇವಾ ನಿಯಮಗಳು –2).

**ಕರ್ನಾಟಕ ಸರ್ಕಾರ**

ಸಂಖ್ಯೆ. ಡಿಪಿಎಆರ್ 6 ಎಸ್‌ಡಿಇ 2005

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಧಾನಸೌಧ,
ಬೆಂಗಳೂರು, ದಿನಾಂಕ 25.11.2005

**ಅಧಿಸೂಚನೆ**

ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು, 1957ನ್ನು ಮತ್ತಷ್ಟು ತಿದ್ದುಪಡಿ ಮಾಡಲು ಈ ಮುಂದಿನ ನಿಯಮಗಳ ಕರಡನ್ನು, ಅದರಿಂದ ಬಾಧಿತರಾಗುವ ಸಂಭವವಿರುವ ಎಲ್ಲಾ ವ್ಯಕ್ತಿಗಳಿಂದ, ಸರ್ಕಾರಿ ರಾಜ್ಯಪತ್ರದಲ್ಲಿ ಅದನ್ನು ಪ್ರಕಟಿಸಿದ ದಿನಾಂಕದಿಂದ 15 ದಿನಗಳೊಳಗಾಗಿ ಆಕ್ಷೇಪಣೆಗಳನ್ನು ಮತ್ತು ಸಲಹೆಗಳನ್ನು ಆಹ್ವಾನಿಸಿ, ಕರ್ನಾಟಕ ರಾಜ್ಯ ಸಿವಿಲ್ ಸೇವಾ ಅಧಿನಿಯಮ, 1978 (ಕರ್ನಾಟಕ ಅಧಿನಿಯಮ 1990ರ 14)ರ 3ನೇ ಪ್ರಕರಣದ (2)ನೇ ಉಪಪ್ರಕರಣದ (ಎ) ಖಂಡದ ಮೂಲಕ ಅಗತ್ಯಪಡಿಸಲಾದಂತೆ, ದಿನಾಂಕ 20ನೇ ಅಕ್ಟೋಬರ್ 2005ರ ಕರ್ನಾಟಕ ವಿಶೇಷ ರಾಜ್ಯಪತ್ರದ ಭಾಗ–IVಎ (ಪಿ.ಆರ್. ಸಂಖ್ಯೆ. 1899) ರಲ್ಲಿ ಅಧಿಸೂಚನೆ ಸಂಖ್ಯೆ ಡಿಪಿಎಆರ್ 6 ಎಸ್‌ಡಿಇ 2005, ದಿನಾಂಕ 19ನೇ ಅಕ್ಟೋಬರ್ 2005 ರಲ್ಲಿ ಪ್ರಕಟಿಸಿರುವುದರಿಂದ;

ಸದರಿ ರಾಜ್ಯಪತ್ರವನ್ನು 20.10.2005 ರಂದು ಸಾರ್ವಜನಿಕರಿಗೆ ಲಭ್ಯವಾಗುವಂತೆ ಮಾಡಿರುವುದರಿಂದ;

ಮತ್ತು ಸದರಿ ಕರಡು ನಿಯಮಗಳ ಬಗ್ಗೆ ರಾಜ್ಯ ಸರ್ಕಾರಕ್ಕೆ ಯಾವ ಆಕ್ಷೇಪಣೆಗಳೂ ಮತ್ತು ಸಲಹೆಗಳೂ ಬಾರದಿರುವುದರಿಂದ;

ಈಗ ಕರ್ನಾಟಕ ಸಿವಿಲ್ ಸೇವಾ ಅಧಿನಿಯಮ, 1978 (ಕರ್ನಾಟಕ ಅಧಿನಿಯಮ 1990ರ 14)ರ 8ನೇ ಪ್ರಕರಣದೊಂದಿಗೆ ಓದಿಕೊಂಡ 3ನೇ ಪ್ರಕರಣದ (1)ನೇ ಉಪಪ್ರಕರಣದಿಂದ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು, ಈ ಮೂಲಕ ಈ ಮುಂದಿನ ನಿಯಮಗಳನ್ನು ರಚಿಸುತ್ತದೆ, ಎಂದರೆ:–

**1. ಹೆಸರು ಮತ್ತು ಪ್ರಾರಂಭ.–** ಈ ನಿಯಮಗಳನ್ನು ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) (20ನೇ ತಿದ್ದುಪಡಿ) ನಿಯಮಗಳು, 2007 ಎಂದು ಕರೆಯತಕ್ಕದ್ದು.

(2) ಅವು ಸರ್ಕಾರಿ ರಾಜ್ಯಪತ್ರದಲ್ಲಿ ಅವುಗಳನ್ನು ಪ್ರಕಟಿಸಿದ ದಿನಾಂಕದಿಂದ ಜಾರಿಗೆ ಬರತಕ್ಕದ್ದು.

**2. ಅನುಸೂಚಿ Iರ ತಿದ್ದುಪಡಿ.–** ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು, 1957ರ (ಇಲ್ಲಿ ಇನ್ನು ಮುಂದೆ ಸದರಿ ನಿಯಮಗಳೆಂದು ಉಲ್ಲೇಖಿಸಲಾಗಿದೆ) ಅನುಸೂಚಿ I ರಲ್ಲಿ, ಕ್ರಮಸಂಖ್ಯೆ 39ರ ಮತ್ತು ಅದಕ್ಕೆ ಸಂಬಂಧಪಟ್ಟ ನಮೂದುಗಳ ತರುವಾಯ ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

"40. ಕರ್ನಾಟಕ ಸಾಮಾನ್ಯ ಸೇವೆ (ಆಡಳಿತ ತರಬೇತಿ ಸಂಸ್ಥೆ ಮತ್ತು ಜಿಲ್ಲಾ ತರಬೇತಿ ಸಂಸ್ಥೆಗಳು)."

**3. ಅನುಸೂಚಿ IIರ ತಿದ್ದುಪಡಿ.–** ಸದರಿ ನಿಯಮಗಳ ಅನುಸೂಚಿ IIರಲ್ಲಿ "ಆಡಳಿತ ತರಬೇತಿ ಸಂಸ್ಥೆ, ಮೈಸೂರು" ಶೀರ್ಷಿಕೆಗೆ ಮತ್ತು ಅದರ ಅಡಿಯಲ್ಲಿ ಇರುವ ನಮೂದುಗಳಿಗೆ ಬದಲಾಗಿ ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

**ಕರ್ನಾಟಕ ಸಾಮಾನ್ಯ ಸೇವೆ (ಆಡಳಿತ ತರಬೇತಿ ಸಂಸ್ಥೆ ಮತ್ತು ಜಿಲ್ಲಾ ತರಬೇತಿ ಸಂಸ್ಥೆಗಳು)**

| | | | | |
|---|---|---|---|---|
| ಅಧೀಕ್ಷಕರು | ಮಹಾ ನಿರ್ದೇಶಕರು | ಜಂಟಿ ನಿರ್ದೇಶಕರು<br>ಮಹಾ ನಿರ್ದೇಶಕರು | (ii) ರಿಂದ (ivಎ)<br>(v) ರಿಂದ (viii) | ಮಹಾ ನಿರ್ದೇಶಕರು<br>ಸರ್ಕಾರ |
| ಕಾರ್ಯಕ್ರಮ ಸಹಾಯಕ, ಹಿರಿಯ ಗ್ರಂಥಪಾಲಕ, ಪ್ರಥಮ ದರ್ಜೆ ಸಹಾಯಕರು, ಶೀಘ್ರಲಿಪಿಗಾರರು, ಹಿರಿಯ ಬೆರಳಚ್ಚುಗಾರರು, ಹಿರಿಯ ವಾಹನ ಚಾಲಕರು, ದ್ವಿತೀಯ ದರ್ಜೆ ಸಹಾಯಕರು, ಟೆಲಿಫೋನ್ ಆಪರೇಟರ್, ಬೆರಳಚ್ಚುಗಾರ, ವಾಹನ ಚಾಲಕ | ಮಹಾ ನಿರ್ದೇಶಕರು | ಜಂಟಿ ನಿರ್ದೇಶಕರು<br>ಮಹಾ ನಿರ್ದೇಶಕರು | (ii) ರಿಂದ (ivಎ)<br>(v) ರಿಂದ (viii) | ಮಹಾ ನಿರ್ದೇಶಕರು<br>ಸರ್ಕಾರ |
| ಗ್ರಂಥಪಾಲಕ, ಬೋಧಕರು, ದೈಹಿಕ ತರಬೇತಿ ಶಿಕ್ಷಕರು, ಲೆಕ್ಕಪತ್ರ ಗುಮಾಸ್ತ, ತೋಟಗಾರಿಕೆ ಸಹಾಯಕ | ಮಾತೃ ಇಲಾಖೆಯಲ್ಲಿನ ನೇಮಕ ಪ್ರಾಧಿಕಾರಿ | ಜಂಟಿ ನಿರ್ದೇಶಕರು<br>ಮಾತೃ ಇಲಾಖೆಯಲ್ಲಿ ನೇಮಕ ಪ್ರಾಧಿಕಾರಿ | (ii) ರಿಂದ (ivಎ)<br>(v) ರಿಂದ (viii) | ಮಹಾ ನಿರ್ದೇಶಕರು<br>ಮಾತೃ ಇಲಾಖೆಯಲ್ಲಿನ ಸಂಬಂಧಪಟ್ಟ ಅಪೀಲು ಪ್ರಾಧಿಕಾರಿ |

**4. ಅನುಸೂಚಿ IIIರ ತಿದ್ದುಪಡಿ.–** ಸದರಿ ನಿಯಮಗಳ ಅನುಸೂಚಿ III ರಲ್ಲಿ "ಆಡಳಿತ ತರಬೇತಿ ಸಂಸ್ಥೆ, ಮೈಸೂರು" ಶೀರ್ಷಿಕೆಗೆ ಮತ್ತು ಅದರಡಿಯಲ್ಲಿ ಇರುವ ನಮೂದುಗಳಿಗೆ ಬದಲಾಗಿ ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

**ಕರ್ನಾಟಕ ಸಾಮಾನ್ಯ ಸೇವೆ (ಆಡಳಿತ ತರಬೇತಿ ಸಂಸ್ಥೆ ಮತ್ತು ಜಿಲ್ಲಾ ತರಬೇತಿ ಸಂಸ್ಥೆಗಳು)**

| | | | | |
|---|---|---|---|---|
| ಜಮೇದಾರ, ಅಟೆಂಡರ್, ಅಡುಗೆಯವರು, ದಲಾಯತ್, ರಾತ್ರಿ ಕಾವಲುಗಾರ, ರೋನಿಯೋ ಆಪರೇಟರ್, ಹೆಲ್ಪರ್, ರೂಮ್‌ಬಾಯ್, ಮಾಣಿ, ಕ್ಲೀನರ್, ಕಸ ಗುಡಿಸುವವ, ಕಾವಲುಗಾರ– ಹಾಗೂ– ಮಾಲಿ, ಮಾಲಿ | ಮಹಾ ನಿರ್ದೇಶಕರು | ಜಂಟಿ ನಿರ್ದೇಶಕರು<br>ಮಹಾ ನಿರ್ದೇಶಕರು | (i) ರಿಂದ (ivಎ)<br>(v) ರಿಂದ (viii) | ಮಹಾ ನಿರ್ದೇಶಕರು<br>ಸರ್ಕಾರ |
| ತೋಟಗಾರ | ಮಾತೃ ಇಲಾಖೆ ನೇಮಕ ಪ್ರಾಧಿಕಾರಿ | ಜಂಟಿ ನಿರ್ದೇಶಕರು<br>ಮಾತೃ ಇಲಾಖೆ ನೇಮಕ ಪ್ರಾಧಿಕಾರಿ | (i) ರಿಂದ (ivಎ)<br>(v) ರಿಂದ (viii) | ಮಹಾ ನಿರ್ದೇಶಕರು<br>ಮಾತೃ ಇಲಾಖೆಯಲ್ಲಿನ ಸಂಬಂಧಪಟ್ಟ ಅಪೀಲು ಪ್ರಾಧಿಕಾರಿ |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ವಿ. ರಮಾ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ, (ಸೇವಾ ನಿಯಮಗಳು –2).

**ಕರ್ನಾಟಕ ಸರ್ಕಾರ**

ಸಂಖ್ಯೆ. ಡಿಪಿಎಆರ್ 3 ಎಸ್‌ಡಿಇ 2004

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಧಾನಸೌಧ,
ಬೆಂಗಳೂರು, ದಿನಾಂಕ 31.12.2005

**ತಿದ್ದೋಲೆ**

ಅಧಿಸೂಚನೆ ಸಂಖ್ಯೆ. ಡಿಪಿಎಆರ್ 3 ಎಸ್‌ಡಿಇ 2004 ದಿನಾಂಕ 11.11.2005 ರಲ್ಲಿ ಪ್ರಕಟಿಸಿದ ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) (18ನೇ ತಿದ್ದುಪಡಿ) ನಿಯಮಗಳು, 2005ರ 2ನೇ ನಿಯಮದಲ್ಲಿ, ಅನುಸೂಚಿ II ರಲ್ಲಿ "II(ಎ) ಮುಖ್ಯ ಜೈಲರ್, ಜೈಲರ್, ಮುಖ್ಯ ವಾರ್ಡರ್, ಕಚೇರಿ ಅಧೀಕ್ಷಕ, ಪ್ರಥಮ ದರ್ಜೆ ಸಹಾಯಕ, ಮುಖ್ಯ ಬೋಧಕ, ಬೋಧಕ ದರ್ಜೆ I, ಹಿರಿಯ ಬೆರಳಚ್ಚುಗಾರ, ಹಿರಿಯ ವಾಹನ ಚಾಲಕ, ಶೀಘ್ರಲಿಪಿಗಾರ, ಮುಖ್ಯ ವಾರ್ಡರ್" ನಮೂದುಗಳ ಎದುರಿಗೆ ಇರುವ ಅಂಕಣ 3ರ ಅಡಿಯಲ್ಲಿ ಇರುವ "ಮುಖ್ಯ ಅಧೀಕ್ಷಕ, ಪ್ರಾಂಶುಪಾಲರು, ಕಾರಾಗೃಹ ತರಬೇತಿ ಸಂಸ್ಥೆ" ಎಂಬ ಪದಗಳನ್ನು "ಮುಖ್ಯ ಅಧೀಕ್ಷಕ, ಅಧೀಕ್ಷಕ, ಪ್ರಾಂಶುಪಾಲರು, ಕಾರಾಗೃಹ ತರಬೇತಿ ಸಂಸ್ಥೆ" ಎಂದು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು
ಅವರ ಹೆಸರಿನಲ್ಲಿ,
**ಕೆ.ವಿ. ರಮಾ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ.
(ಸೇವಾ ನಿಯಮಗಳು – 2).

**ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ. ಡಿಪಿಎಆರ್ 12 ಎಸ್‌ಡಿಇ 2005, ಬೆಂಗಳೂರು, ದಿನಾಂಕ 24.04.2006**

ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು, 1957ನ್ನು ಮತ್ತಷ್ಟು ತಿದ್ದುಪಡಿ ಮಾಡಲು ಈ ಮುಂದಿನ ನಿಯಮಗಳ ಕರಡನ್ನು, ಅದರಿಂದ ಬಾಧಿತರಾಗುವ ಸಂಭವವಿರುವ ಎಲ್ಲಾ ವ್ಯಕ್ತಿಗಳಿಂದ, ಸರ್ಕಾರಿ ರಾಜ್ಯಪತ್ರದಲ್ಲಿ ಅದನ್ನು ಪ್ರಕಟಿಸಿದ ದಿನಾಂಕದಿಂದ 15 ದಿನಗಳೊಳಗಾಗಿ ಆಕ್ಷೇಪಣೆಗಳನ್ನು ಮತ್ತು ಸಲಹೆಗಳನ್ನು ಆಹ್ವಾನಿಸಿ, ಕರ್ನಾಟಕ ರಾಜ್ಯ ಸಿವಿಲ್ ಸೇವಾ ಅಧಿನಿಯಮ, 1978 (ಕರ್ನಾಟಕ ಅಧಿನಿಯಮ 1990ರ 14)ರ 3ನೇ ಪ್ರಕರಣದ (2)ನೇ ಉಪಪ್ರಕರಣದ (ಎ) ಖಂಡದ ಮೂಲಕ ಅಗತ್ಯಪಡಿಸಲಾದಂತೆ, ದಿನಾಂಕ 23ನೇ ಮಾರ್ಚ್ 2006ರ ಕರ್ನಾಟಕ ವಿಶೇಷ ರಾಜ್ಯಪತ್ರದ ಭಾಗ–IVಎ (ಪಿ.ಆರ್. ಸಂಖ್ಯೆ. 319) ರಲ್ಲಿ ಅಧಿಸೂಚನೆ ಸಂಖ್ಯೆ ಡಿಪಿಎಆರ್ 12 ಎಸ್‌ಡಿಇ 2005, ದಿನಾಂಕ 22ನೇ ಮಾರ್ಚ್ 2006 ರಲ್ಲಿ ಪ್ರಕಟಿಸಿರುವುದರಿಂದ;

ಸದರಿ ರಾಜ್ಯಪತ್ರವನ್ನು 2006ರ ಮಾರ್ಚ್ 23 ರಂದು ಸಾರ್ವಜನಿಕರಿಗೆ ಲಭ್ಯವಾಗುವಂತೆ ಮಾಡಿರುವುದರಿಂದ;

ಮತ್ತು ಈ ಕರಡು ನಿಯಮಗಳ ಬಗ್ಗೆ ಸ್ವೀಕರಿಸಿದ ಆಕ್ಷೇಪಣೆಗಳನ್ನು ಮತ್ತು ಸಲಹೆಗಳನ್ನು ರಾಜ್ಯ ಸರ್ಕಾರವು ಪರಿಗಣಿಸಿರುವುದರಿಂದ;

ಈಗ, ಕರ್ನಾಟಕ ಸಿವಿಲ್ ಸೇವಾ ಅಧಿನಿಯಮ, 1978 (ಕರ್ನಾಟಕ ಅಧಿನಿಯಮ 1990ರ 14)ರ 8ನೇ ಪ್ರಕರಣದೊಂದಿಗೆ ಓದಿಕೊಂಡ 3ನೇ ಪ್ರಕರಣದ (1)ನೇ ಉಪಪ್ರಕರಣದಿಂದ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು, ಈ ಮೂಲಕ ಈ ಮುಂದಿನ ನಿಯಮಗಳನ್ನು ರಚಿಸುತ್ತದೆ, ಎಂದರೆ:–

**1. ಹೆಸರು ಮತ್ತು ಪ್ರಾರಂಭ.**– ಈ ನಿಯಮಗಳನ್ನು ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) (21ನೇ ತಿದ್ದುಪಡಿ) ನಿಯಮಗಳು, 2006 ಎಂದು ಕರೆಯತಕ್ಕದ್ದು.

(2) ಅವು ಸರ್ಕಾರಿ ರಾಜ್ಯಪತ್ರದಲ್ಲಿ ಅವುಗಳನ್ನು ಪ್ರಕಟಿಸಿದ ದಿನಾಂಕದಿಂದ ಜಾರಿಗೆ ಬರತಕ್ಕದ್ದು.

**2. 15ನೇ ನಿಯಮದ ತಿದ್ದುಪಡಿ.**– ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು, 1957ರ 15ನೇ ನಿಯಮದಲ್ಲಿ,–

(1) (2ಎ) ಉಪನಿಯಮದ ತರುವಾಯ, ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

"(2ಬಿ) ಈ ನಿಯಮಗಳಲ್ಲಿ ಏನೇ ಒಳಗೊಂಡಿದ್ದರೂ,–

(i) ಸಮೂಹ 'ಎ' ಅಥವಾ 'ಬಿ' ಹುದ್ದೆಯನ್ನು ಹೊಂದಿರುವ ಯಾವ ಸರ್ಕಾರಿ ನೌಕರನ ಸೇವೆಯನ್ನು ಕರ್ನಾಟಕ ಪೌರ ನಿಗಮಗಳ ಅಧಿನಿಯಮ, 1976ರ ಅಡಿಯಲ್ಲಿ, ಸರ್ಕಾರದ ನಗರಾಭಿವೃದ್ಧಿ ಇಲಾಖೆಯು ಹೊರಡಿಸಿದ ಆದೇಶದ ಮೂಲಕ ನಗರ ಪೌರ ನಿಗಮಕ್ಕೆ ಎರವಲು ನೀಡಲಾಗಿದೆಯೋ ಆ ಸರ್ಕಾರಿ ನೌಕರನ ಸಂಬಂಧದಲ್ಲಿ ಸರ್ಕಾರವು;

(ii) ಸಮೂಹ 'ಸಿ' ಅಥವಾ 'ಡಿ' ಹುದ್ದೆಯನ್ನು ಹೊಂದಿರುವ ಯಾವ ಸರ್ಕಾರಿ ನೌಕರನ ಸೇವೆಯನ್ನು ನಗರ ಪೌರನಿಗಮಕ್ಕೆ ಎರವಲು ನೀಡಲಾಗಿದೆಯೋ ಆ ಸರ್ಕಾರಿ ನೌಕರನ ಸಂಬಂಧದಲ್ಲಿ, ನಗರ ಪೌರನಿಗಮದ ಆಯುಕ್ತರು

– ಅಂಥ ಸರ್ಕಾರಿ ನೌಕರನನ್ನು ಅಮಾನತಿನಲ್ಲಿಡಲು ನೇಮಕ ಪ್ರಾಧಿಕಾರಿಯ ಅಧಿಕಾರಗಳನ್ನು ಮತ್ತು ಅವನ ವಿರುದ್ಧ ಶಿಸ್ತು ವ್ಯವಹರಣೆಗಳನ್ನು ಕೈಗೊಳ್ಳುವ ಉದ್ದೇಶಕ್ಕಾಗಿ ಶಿಸ್ತು ಪ್ರಾಧಿಕಾರಿಯ ಅಧಿಕಾರಗಳನ್ನು ಮತ್ತು ಅಂಥ ಸರ್ಕಾರಿ ನೌಕರನ ಮೇಲೆ 8ನೇ ನಿಯಮದ (i) ರಿಂದ (ivಎ) ವರೆಗಿನ ಖಂಡಗಳಲ್ಲಿ ನಿರ್ದಿಷ್ಟಪಡಿಸಿದ ದಂಡನೆಗಳಲ್ಲಿ ಯಾವುದೇ ದಂಡನೆಯನ್ನು ವಿಧಿಸಲು ಶಿಸ್ತು ಪ್ರಾಧಿಕಾರಿಯ ಅಧಿಕಾರಗಳನ್ನು ಹೊಂದಿರತಕ್ಕದ್ದು. ಅಂಥ ಸರ್ಕಾರಿ ನೌಕರನನ್ನು ಅಮಾನತಿನಲ್ಲಿಡುವುದಕ್ಕೆ ಅಥವಾ ಸದರಿ ದಂಡನೆಗಳಲ್ಲಿ ಯಾವುದೇ ದಂಡನೆಯನ್ನು ಅವನಿಗೆ ವಿಧಿಸುವುದಕ್ಕೆ ಮುಂಚೆ ಎರವಲು ಕೊಟ್ಟ ಪ್ರಾಧಿಕಾರಿಯ ಅಥವಾ ಸಂದರ್ಭಾನುಸಾರ, ನೇಮಕ ಪ್ರಾಧಿಕಾರಿಯ ಅನುಮೋದನೆ ಪಡೆಯುವುದು ಅಥವಾ ಅವರೊಡನೆ ಸಮಾಲೋಚಿಸುವುದು ಸರ್ಕಾರದ ನಗರಾಭಿವೃದ್ಧಿ ಇಲಾಖೆಗೆ ಅಥವಾ ಆಯುಕ್ತರಿಗೆ ಅವಶ್ಯಕವಾಗಿರತಕ್ಕದ್ದಲ್ಲ".

(2) (3)ನೇ ಉಪನಿಯಮಕ್ಕೆ ಬದಲಾಗಿ ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

"(3) ಈ ನಿಯಮಗಳಲ್ಲಿ ಏನೇ ಒಳಗೊಂಡಿದ್ದರೂ, (2ಎ) ಅಥವಾ (2ಬಿ) ಉಪನಿಯಮಗಳಲ್ಲಿ ಉಲ್ಲೇಖಿಸಿದ ಸರ್ಕಾರಿ ನೌಕರನು,–

(i) ಜಿಲ್ಲಾ ಪಂಚಾಯಿತಿಯಲ್ಲಿ, ತಾಲೂಕು ಪಂಚಾಯಿತಿಯಲ್ಲಿ, ಗ್ರಾಮ ಪಂಚಾಯಿತಿಯಲ್ಲಿ ಅಥವಾ ಪೌರ ನಿಗಮದಲ್ಲಿ ಸೇವೆ ಸಲ್ಲಿಸುತ್ತಿರುವಾಗ, ಯಾವುದೇ ದುರ್ನಡತೆ ಅಥವಾ ದುರ್ವರ್ತನೆಯನ್ನು ಎಸಗಿದ್ದಾನೆಂದು ಆರೋಪಿಸಲಾಗಿರುವ, ಅಂಥ ಸರ್ಕಾರಿ ನೌಕರನ ವಿರುದ್ಧ ಶಿಸ್ತು ವ್ಯವಹರಣೆಯನ್ನು ಪ್ರಾರಂಭಿಸುವುದಕ್ಕೆ ಮುಂಚೆ (2ಎ) ಅಥವಾ (2ಬಿ) ಉಪನಿಯಮದಲ್ಲಿ ನಿರ್ದಿಷ್ಟಪಡಿಸಿದ ಶಿಸ್ತು ಪ್ರಾಧಿಕಾರಿಯ ಅಧಿಕಾರ ವ್ಯಾಪ್ತಿಯಿಂದ ಹೊರಗೆ ವರ್ಗಾಯಿಸಿದ್ದಲ್ಲಿ, ಪ್ರತಿನಿಯೋಜಿಸಿದ್ದಲ್ಲಿ ಅಥವಾ ಇತರ ರೀತಿಯಲ್ಲಿ ಸ್ಥಳನಿಯುಕ್ತಿಗೊಳಿಸಿದ್ದಲ್ಲಿ, ಅದೇ ಶಿಸ್ತು ಪ್ರಾಧಿಕಾರಿಯು ಶಿಸ್ತು ವ್ಯವಹರಣೆಗಳನ್ನು ಪ್ರಾರಂಭಿಸಲು ಮತ್ತು ಅಂಥ ಸರ್ಕಾರಿ ನೌಕರನ ಮೇಲಣ ಆರೋಪ ವಿಷಯಗಳ ವಿಚಾರಣೆಯನ್ನು ಮುಕ್ತಾಯಗೊಳಿಸಲು ಅಥವಾ ಮುಕ್ತಾಯಗೊಳಿಸುವಂತೆ ಮಾಡಲು ಮತ್ತು ಅಂಥ ಸರ್ಕಾರಿ ನೌಕರನ ಮೇಲೆ 8ನೇ ನಿಯಮದ (i) ರಿಂದ (ivಎ) ವರೆಗಿನ ಖಂಡಗಳಲ್ಲಿ ನಿರ್ದಿಷ್ಟಪಡಿಸಿದ ದಂಡನೆಗಳಲ್ಲಿ ಯಾವುದೇ ದಂಡನೆಯನ್ನು ವಿಧಿಸಲು ಅಧಿಕಾರ ಹೊಂದಿರತಕ್ಕದ್ದು.

(ii) ಶಿಸ್ತು ವ್ಯವಹರಣೆಯು ಇತ್ಯರ್ಥದಲ್ಲಿರುವಾಗ, ಅಂಥ ಸರ್ಕಾರಿ ನೌಕರನ ವಿರುದ್ಧ ಶಿಸ್ತು ವ್ಯವಹರಣೆಯನ್ನು ಪ್ರಾರಂಭಿಸಿದ (2ಎ) ಅಥವಾ (2ಬಿ) ಉಪನಿಯಮದಲ್ಲಿ ಉಲ್ಲೇಖಿಸಿದ ಶಿಸ್ತು ಪ್ರಾಧಿಕಾರಿಯ ಅಧಿಕಾರ ವ್ಯಾಪ್ತಿಯಿಂದ ಹೊರಗೆ ಅಂಥ ಸರ್ಕಾರಿ ನೌಕರನನ್ನು ವರ್ಗಾಯಿಸಿದ್ದಲ್ಲಿ, ಪ್ರತಿನಿಯೋಜಿಸಿದ್ದಲ್ಲಿ ಅಥವಾ ಇತರೆ ರೀತಿಯಲ್ಲಿ ಸ್ಥಳನಿಯುಕ್ತಿಗೊಳಿಸಿದ್ದಲ್ಲಿ, ಅದೇ ಶಿಸ್ತು ಪ್ರಾಧಿಕಾರಿಯು ಈ ನಿಯಮಗಳಿಗೆ ಅನುಸಾರವಾಗಿ ಅಂಥ ಸರ್ಕಾರಿ ನೌಕರನ ಮೇಲಣ ಆರೋಪ ವಿಷಯಗಳ ವಿಚಾರಣೆಯನ್ನು ಮುಂದುವರೆಸತಕ್ಕದ್ದು ಮತ್ತು ಮುಕ್ತಾಯಗೊಳಿಸತಕ್ಕದ್ದು ಅಥವಾ ಮುಂದುವರೆಯುವಂತೆ ಅಥವಾ ಮುಕ್ತಾಯಗೊಳಿಸುವಂತೆ ಮಾಡತಕ್ಕದ್ದು ಮತ್ತು ಅಂಥ ಸರ್ಕಾರಿ ನೌಕರನ ಮೇಲೆ 8ನೇ ನಿಯಮದ (i) ರಿಂದ (ivಎ) ವರೆಗಿನ ಖಂಡಗಳಲ್ಲಿ ನಿರ್ದಿಷ್ಟಪಡಿಸಿದ ದಂಡನೆಗಳಲ್ಲಿ ಯಾವುದೇ ದಂಡನೆಯನ್ನು ವಿಧಿಸಲು ಅಧಿಕಾರ ಹೊಂದಿರತಕ್ಕದ್ದು:

ಪರಂತು, ಈ ಉಪನಿಯಮದ ಅಡಿಯಲ್ಲಿ, ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಯು ಅಥವಾ ಸಂದರ್ಭಾನುಸಾರ ಕಮಿಷನರು ಹೊರಡಿಸಿದ ಆದೇಶದ ವಿರುದ್ಧ,–

(i) (2ಎ) ಉಪನಿಯಮದ (ii)ನೇ ಖಂಡದ (ಎ) ಉಪಖಂಡದಲ್ಲಿ ಅಥವಾ (2ಬಿ) ಉಪ ನಿಯಮದ (ii)ನೇ ಖಂಡದಲ್ಲಿ ಉಲ್ಲೇಖಿಸಿದ ಸರ್ಕಾರಿ ನೌಕರನು, ತಾನು ಯಾವ ಇಲಾಖೆಗೆ ಸೇರಿರುವನೋ ಆ ಇಲಾಖಾ ಮುಖ್ಯಸ್ಥರಿಗೆ;

(ii) (2ಎ) ಉಪನಿಯಮದ (ii)ನೇ ಖಂಡದ (ಬಿ) ಉಪಖಂಡದಲ್ಲಿ ಉಲ್ಲೇಖಿಸಿದ ವೈದ್ಯನು, ಸರ್ಕಾರಕ್ಕೆ

– ಅಪೀಲನ್ನು ಸಲ್ಲಿಸಬಹುದು".

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು
ಅವರ ಹೆಸರಿನಲ್ಲಿ,

**ಕೆ.ವಿ. ರಮಾ**

ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ,
(ಸೇವಾ ನಿಯಮಗಳು –2).

**ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ**

**ಅಧಿಸೂಚನೆ**

**ಸಂ: ಡಿಪಿಎಆರ್ 1 ಎಸ್‌ಡಿಇ 2006, ದಿನಾಂಕ 28.07.2006**

ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು, 1957ನ್ನು ಮತ್ತಷ್ಟು ತಿದ್ದುಪಡಿ ಮಾಡಲು ಈ ಮುಂದಿನ ನಿಯಮಗಳ ಕರಡನ್ನು, ಅದರಿಂದ ಬಾಧಿತರಾಗುವ ಸಂಭವವಿರುವ ಎಲ್ಲಾ ವ್ಯಕ್ತಿಗಳಿಂದ, ಸರ್ಕಾರಿ ರಾಜ್ಯಪತ್ರದಲ್ಲಿ ಅದನ್ನು ಪ್ರಕಟಿಸಿದ ದಿನಾಂಕದಿಂದ 15 ದಿನಗಳೊಳಗಾಗಿ ಆಕ್ಷೇಪಣೆಗಳನ್ನು ಮತ್ತು ಸಲಹೆಗಳನ್ನು ಆಹ್ವಾನಿಸಿ, ಕರ್ನಾಟಕ ರಾಜ್ಯ ಸಿವಿಲ್ ಸೇವಾ ಅಧಿನಿಯಮ, 1978 (ಕರ್ನಾಟಕ ಅಧಿನಿಯಮ 1990ರ 14)ರ 3ನೇ ಪ್ರಕರಣದ (2)ನೇ ಉಪಪ್ರಕರಣದ (ಎ) ಖಂಡದ ಮೂಲಕ ಅಗತ್ಯಪಡಿಸಲಾದಂತೆ, ದಿನಾಂಕ 23ನೇ

ಜೂನ್ 2006ರ ಕರ್ನಾಟಕ ವಿಶೇಷ ರಾಜ್ಯಪತ್ರದ ಭಾಗ–IVಎ (ಪಿ.ಆರ್. ಸಂಖ್ಯೆ. 788) ರಲ್ಲಿ ಅಧಿಸೂಚನೆ ಸಂಖ್ಯೆ ಡಿಪಿಎಆರ್ 1 ಎಸ್‌ಡಿಇ 2006, ದಿನಾಂಕ 22ನೇ ಜೂನ್, 2006 ರಲ್ಲಿ ಪ್ರಕಟಿಸಿರುವುದರಿಂದ;

ಸದರಿ ರಾಜ್ಯಪತ್ರವನ್ನು 23.6.2006 ರಂದು ಸಾರ್ವಜನಿಕರಿಗೆ ಲಭ್ಯವಾಗುವಂತೆ ಮಾಡಿರುವುದರಿಂದ;

ಮತ್ತು, ಈ ಕರಡು ನಿಯಮಗಳ ಬಗ್ಗೆ ರಾಜ್ಯ ಸರ್ಕಾರಕ್ಕೆ ಯಾವ ಆಕ್ಷೇಪಣೆಗಳೂ ಮತ್ತು ಸಲಹೆಗಳೂ ಬಾರದಿರುವುದರಿಂದ;

ಈಗ, ಕರ್ನಾಟಕ ರಾಜ್ಯ ಸಿವಿಲ್ ಸೇವಾ ಅಧಿನಿಯಮ, 1978 (ಕರ್ನಾಟಕ ಅಧಿನಿಯಮ ಸಂಖ್ಯೆ 1990ರ 14)ರ 8ನೇ ಪ್ರಕರಣದೊಂದಿಗೆ ಓದಿಕೊಂಡ 3ನೇ ಪ್ರಕರಣದ (1)ನೇ ಉಪಪ್ರಕರಣದಿಂದ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಈ ಮೂಲಕ ಈ ಮುಂದಿನ ನಿಯಮಗಳನ್ನು ರಚಿಸುತ್ತದೆ, ಎಂದರೆ:–

**1. ಹೆಸರು ಮತ್ತು ಪ್ರಾರಂಭ.**– (1) ಈ ನಿಯಮಗಳನ್ನು ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) (22ನೇ ತಿದ್ದುಪಡಿ) ನಿಯಮಗಳು, 2006 ಎಂದು ಕರೆಯತಕ್ಕದ್ದು.

(2) ಅವು ಸರ್ಕಾರಿ ರಾಜ್ಯಪತ್ರದಲ್ಲಿ ಅವುಗಳನ್ನು ಪ್ರಕಟಿಸಿದ ದಿನಾಂಕದಿಂದ ಜಾರಿಗೆ ಬರತಕ್ಕದ್ದು.

**2. 9ನೇ ನಿಯಮದ ತಿದ್ದುಪಡಿ.**– ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು, 1957ರ 9ನೇ ನಿಯಮದಲ್ಲಿ, (ಬಿಬಿ) ಮತ್ತು (ಬಿಬಿಬಿ) ಖಂಡಗಳಿಗೆ ಬದಲಾಗಿ ಈ ಮುಂದಿನದನ್ನು ಅನುಕ್ರಮವಾಗಿ ಸೇರಿಸತಕ್ಕದ್ದು, ಎಂದರೆ:–

"(ಬಿಬಿ) ಅಖಿಲ ಭಾರತ ಸೇವೆಗಳಿಗೆ ಸೇರಿರದ, ಆದರೆ 12800–16720 ರೂ.ಗಳ ಮತ್ತು ಅದಕ್ಕೂ ಮೇಲ್ಪಟ್ಟ (ಅಥವಾ ಕಾಲಕಾಲಕ್ಕೆ ಪರಿಷ್ಕೃತವಾಗಬಹುದಾದುದಕ್ಕೆ ಸಮಾನವಾದ) ವೇತನ ಶ್ರೇಣಿ ಹೊಂದಿರುವ ಇಲಾಖಾ ಮುಖ್ಯಸ್ಥರು ಮತ್ತು ಅಖಿಲ ಭಾರತ ಸೇವೆಗಳಿಗೆ ಸೇರಿದ ಇಲಾಖಾ ಮುಖ್ಯಸ್ಥರು, ತಮ್ಮ ಆಡಳಿತ ನಿಯಂತ್ರಣದಲ್ಲಿ ಕೆಲಸ ನಿರ್ವಹಿಸುತ್ತಿರುವ 8000–13440 ರೂ.ಗಳಿಗಿಂತ (ಅಥವಾ ಕಾಲಕಾಲಕ್ಕೆ ಪರಿಷ್ಕೃತವಾಗಬಹುದಾದುದಕ್ಕೆ ಸಮಾನವಾದುದಕ್ಕಿಂತ) ಹೆಚ್ಚಲ್ಲದ ವೇತನ ಶ್ರೇಣಿ ಹೊಂದಿರುವ ಸಮೂಹ–ಬಿ ಹುದ್ದೆಯನ್ನು ಅಥವಾ ಸಮೂಹ– ಎ ಹುದ್ದೆಯನ್ನು ಹೊಂದಿರುವ ರಾಜ್ಯ ಸಿವಿಲ್ ಸೇವೆಯ ಸದಸ್ಯನ ಮೇಲೆ 8ನೇ ನಿಯಮದ (ii), (iii), (iiiಎ), (iv) ಮತ್ತು (ivಎ) ಖಂಡಗಳಲ್ಲಿ ನಿರ್ದಿಷ್ಟಪಡಿಸಿದ ದಂಡನೆಗಳಲ್ಲಿ ಯಾವುದೇ ದಂಡನೆಯನ್ನು ವಿಧಿಸಬಹುದು.

(ಬಿಬಿಬಿ) ಅಖಿಲ ಭಾರತ ಸೇವೆಗಳಿಗೆ ಸೇರಿರದ, ಆದರೆ 12800–16720 ರೂ.ಗಳಿಗಿಂತ ಕಡಿಮೆ (ಅಥವಾ ಕಾಲಕಾಲಕ್ಕೆ ಪರಿಷ್ಕೃತವಾಗಬಹುದಾದುದಕ್ಕೆ ಸಮಾನವಾದ) ವೇತನ ಶ್ರೇಣಿ ಹೊಂದಿರುವ ಇಲಾಖಾ ಮುಖ್ಯಸ್ಥರು ಮತ್ತು ಅಖಿಲ ಭಾರತ ಸೇವೆಗಳಿಗೆ ಸೇರಿದ ಇಲಾಖಾ ಮುಖ್ಯಸ್ಥರು, ತಮ್ಮ ಆಡಳಿತ ನಿಯಂತ್ರಣದಲ್ಲಿ ಕೆಲಸ ನಿರ್ವಹಿಸುತ್ತಿರುವ ರಾಜ್ಯ ಸಿವಿಲ್ ಸೇವೆಯಲ್ಲಿ ಸಮೂಹ ಬಿ ಹುದ್ದೆಯನ್ನು ಹೊಂದಿರುವ ಸದಸ್ಯನ ಮೇಲೆ 8ನೇ ನಿಯಮದ (ii), (iii), (iiiಎ), (iv) ಮತ್ತು (ivಎ) ಖಂಡಗಳಲ್ಲಿ ನಿರ್ದಿಷ್ಟಪಡಿಸಿದ ದಂಡನೆಗಳಲ್ಲಿ ಯಾವುದೇ ದಂಡನೆಯನ್ನು ವಿಧಿಸಬಹುದು".

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು
ಅವರ ಹೆಸರಿನಲ್ಲಿ,
**ಕೆ.ವಿ. ರಮಾ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ,
(ಸೇವಾ ನಿಯಮಗಳು –2).

**ಕರ್ನಾಟಕ ಸರ್ಕಾರ**

ಸಂಖ್ಯೆ. ಡಿಪಿಎಆರ್ 5 ಎಸ್‌ಡಿಇ 2006

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಧಾನಸೌಧ,
ಬೆಂಗಳೂರು, ದಿನಾಂಕ 16.11.2006

**ಅಧಿಸೂಚನೆ**

ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು, 1957ನ್ನು ಮತ್ತಷ್ಟು ತಿದ್ದುಪಡಿ ಮಾಡಲು ಈ ಮುಂದಿನ ನಿಯಮಗಳ ಕರಡನ್ನು, ಅದರಿಂದ ಬಾಧಿತರಾಗುವ ಸಂಭವವಿರುವ ಎಲ್ಲಾ ವ್ಯಕ್ತಿಗಳಿಂದ, ಸರ್ಕಾರಿ ರಾಜ್ಯಪತ್ರದಲ್ಲಿ ಅದನ್ನು ಪ್ರಕಟಿಸಿದ ದಿನಾಂಕದಿಂದ 15 ದಿನಗಳೊಳಗಾಗಿ ಆಕ್ಷೇಪಣೆಗಳನ್ನು ಮತ್ತು ಸಲಹೆಗಳನ್ನು ಆಹ್ವಾನಿಸಿ, ಕರ್ನಾಟಕ ರಾಜ್ಯ ಸಿವಿಲ್ ಸೇವಾ ಅಧಿನಿಯಮ, 1978 (ಕರ್ನಾಟಕ ಅಧಿನಿಯಮ 1990ರ 14)ರ 3ನೇ ಪ್ರಕರಣದ (2)ನೇ ಉಪಪ್ರಕರಣದ (ಎ) ಖಂಡದ ಮೂಲಕ ಅಗತ್ಯಪಡಿಸಲಾದಂತೆ, ದಿನಾಂಕ 26ನೇ ಸೆಪ್ಟೆಂಬರ್ 2006ರ ಕರ್ನಾಟಕ ವಿಶೇಷ ರಾಜ್ಯಪತ್ರದ ಭಾಗ–IVಎ (ಪಿ.ಆರ್. ಸಂಖ್ಯೆ. 1239) ರಲ್ಲಿ ಅಧಿಸೂಚನೆ ಸಂಖ್ಯೆ ಡಿಪಿಎಆರ್ 5 ಎಸ್‌ಡಿಇ 2006, ದಿನಾಂಕ 25ನೇ ಸೆಪ್ಟೆಂಬರ್ 2006 ರಲ್ಲಿ ಪ್ರಕಟಿಸಿರುವುದರಿಂದ;

ಸದರಿ ರಾಜ್ಯಪತ್ರವನ್ನು 26.9.2006 ರಂದು ಸಾರ್ವಜನಿಕರಿಗೆ ಲಭ್ಯವಾಗುವಂತೆ ಮಾಡಿರುವುದರಿಂದ;

ಮತ್ತು, ಈ ಕರಡು ನಿಯಮಗಳ ಬಗ್ಗೆ ರಾಜ್ಯ ಸರ್ಕಾರಕ್ಕೆ ಯಾವ ಆಕ್ಷೇಪಣೆಗಳೂ ಮತ್ತು ಸಲಹೆಗಳೂ ಬಾರದಿರುವುದರಿಂದ;

ಈಗ ಕರ್ನಾಟಕ ರಾಜ್ಯ ಸಿವಿಲ್ ಸೇವಾ ಅಧಿನಿಯಮ, 1978 (ಕರ್ನಾಟಕ ಅಧಿನಿಯಮ ಸಂಖ್ಯೆ 1990ರ 14)ರ 8ನೇ ಪ್ರಕರಣದೊಂದಿಗೆ ಓದಿಕೊಂಡ 3ನೇ ಪ್ರಕರಣದ (1)ನೇ ಉಪಪ್ರಕರಣದಿಂದ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಈ ಮೂಲಕ ಈ ಮುಂದಿನ ನಿಯಮಗಳನ್ನು ರಚಿಸುತ್ತದೆ, ಎಂದರೆ:–

**1. ಹೆಸರು ಮತ್ತು ಪ್ರಾರಂಭ.**– (1) ಈ ನಿಯಮಗಳನ್ನು ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) (23ನೇ ತಿದ್ದುಪಡಿ) ನಿಯಮಗಳು, 2006 ಎಂದು ಕರೆಯತಕ್ಕದ್ದು.

(2) ಅವು, ಸರ್ಕಾರಿ ರಾಜ್ಯಪತ್ರದಲ್ಲಿ ಅವುಗಳನ್ನು ಪ್ರಕಟಿಸಿದ ದಿನಾಂಕದಿಂದ ಜಾರಿಗೆ ಬರತಕ್ಕದ್ದು.

**2. 15ನೇ ನಿಯಮದ ತಿದ್ದುಪಡಿ.**– ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು, 1957ರ 15ನೇ ನಿಯಮದಲ್ಲಿ,–

(1) (2ಬಿ) ಉಪನಿಯಮದ ತರುವಾಯ ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

"(2ಸಿ) ಈ ನಿಯಮಗಳಲ್ಲಿ ಏನೇ ಒಳಗೊಂಡಿದ್ದರೂ,–

(i) ಸಮೂಹ 'ಎ' ಅಥವಾ 'ಬಿ' ಹುದ್ದೆಗಳನ್ನು ಹೊಂದಿರುವ ಯಾವ ಸರ್ಕಾರಿ ನೌಕರನ ಸೇವೆಯನ್ನು ಕಾವೇರಿ ನೀರಾವರಿ ನಿಗಮ ನಿಯಮಿತಕ್ಕೆ, ಕೃಷ್ಣಾ ಭಾಗ್ಯ ಜಲ ನಿಗಮ ನಿಯಮಿತಕ್ಕೆ, ಕರ್ನಾಟಕ ನೀರಾವರಿ ನಿಗಮ ನಿಯಮಿತಕ್ಕೆ ಎರವಲು ಕೊಡಲಾಗಿದೆಯೋ ಆ ಸರ್ಕಾರಿ ನೌಕರನ ಸಂಬಂಧದಲ್ಲಿ ಸರ್ಕಾರದ ಜಲಸಂಪನ್ಮೂಲ ಇಲಾಖೆಯು;

(ii) ಸಮೂಹ 'ಸಿ' ಅಥವಾ ಸಮೂಹ 'ಡಿ' ಹುದ್ದೆಯನ್ನು ಹೊಂದಿರುವ ಯಾವ ಸರ್ಕಾರಿ ನೌಕರನ ಸೇವೆಯನ್ನು ಸಂದರ್ಭಾನುಸಾರ, ಕಾವೇರಿ ನೀರಾವರಿ ನಿಗಮ ನಿಯಮಿತಕ್ಕೆ, ಕೃಷ್ಣಾ ಭಾಗ್ಯ ಜಲ ನಿಗಮ ನಿಯಮಿತಕ್ಕೆ, ಕರ್ನಾಟಕ ನೀರಾವರಿ ನಿಗಮ ನಿಯಮಿತಕ್ಕೆ ಎರವಲು ಕೊಡಲಾಗಿದೆಯೋ ಆ ಸರ್ಕಾರಿ ನೌಕರನ ಸಂಬಂಧದಲ್ಲಿ ಕಾವೇರಿ ನೀರಾವರಿ ನಿಗಮ ನಿಯಮಿತ, ಕೃಷ್ಣಾ ಭಾಗ್ಯ ಜಲ ನಿಗಮ ನಿಯಮಿತ, ಕರ್ನಾಟಕ ನೀರಾವರಿ ನಿಗಮ ನಿಯಮಿತ – ಇವುಗಳ ವ್ಯವಸ್ಥಾಪಕ ನಿರ್ದೇಶಕರು

– ಅಂಥ ಸರ್ಕಾರಿ ನೌಕರನನ್ನು ಅಮಾನತ್ತಿನಲ್ಲಿಡಲು ನೇಮಕ ಪ್ರಾಧಿಕಾರಿಯ ಅಧಿಕಾರಗಳನ್ನು ಮತ್ತು ಅವನ ವಿರುದ್ಧ ಶಿಸ್ತು ವ್ಯವಹರಣೆಗಳನ್ನು ಕೈಗೊಳ್ಳುವ ಉದ್ದೇಶಕ್ಕಾಗಿ ಶಿಸ್ತು ಪ್ರಾಧಿಕಾರಿಯ ಅಧಿಕಾರಗಳನ್ನು ಮತ್ತು ಅಂಥ ಸರ್ಕಾರಿ ನೌಕರನ ಮೇಲೆ 8ನೇ ನಿಯಮದ (i) ರಿಂದ (ivಎ) ವರೆಗಿನ ಖಂಡಗಳಲ್ಲಿ ನಿರ್ದಿಷ್ಟಪಡಿಸಿದ ದಂಡನೆಗಳಲ್ಲಿ ಯಾವುದೇ ದಂಡನೆಯನ್ನು ವಿಧಿಸಲು ಶಿಸ್ತು ಪ್ರಾಧಿಕಾರಿಯ ಅಧಿಕಾರಗಳನ್ನು ಹೊಂದಿರತಕ್ಕದ್ದು. ಅಂಥ ಸರ್ಕಾರಿ ನೌಕರನನ್ನು ಅಮಾನತ್ತಿನಲ್ಲಿಡುವುದಕ್ಕೆ ಅಥವಾ ಸದರಿ ದಂಡನೆಗಳಲ್ಲಿ ಯಾವುದೇ ದಂಡನೆಯನ್ನು ಅವನಿಗೆ ವಿಧಿಸುವ ಮುಂಚೆ, ಎರವಲು ಕೊಟ್ಟ ಪ್ರಾಧಿಕಾರಿಯ ಅಥವಾ ಸಂದರ್ಭಾನುಸಾರ ನೇಮಕ ಪ್ರಾಧಿಕಾರಿಯ ಅನುಮೋದನೆ ಪಡೆಯುವುದು ಅಥವಾ ಅವರೊಡನೆ ಸಮಾಲೋಚಿಸುವುದು, ಸರ್ಕಾರದ ಜಲ ಸಂಪನ್ಮೂಲ ಇಲಾಖೆಗೆ ಅಥವಾ ವ್ಯವಸ್ಥಾಪಕ ನಿರ್ದೇಶಕರಿಗೆ ಅವಶ್ಯಕವಾಗಿರತಕ್ಕದ್ದಲ್ಲ. ಆದರೆ ಹಾಗೆ ದಂಡನೆ ವಿಧಿಸುವುದನ್ನು ಎರವಲು ಕೊಟ್ಟ ಪ್ರಾಧಿಕಾರಿಗೆ ಅಥವಾ ನೇಮಕ ಪ್ರಾಧಿಕಾರಿಗೆ ತಿಳಿಸುವುದು ಅವಶ್ಯಕ".

(2) (3)ನೇ ಉಪನಿಯಮದ ಬದಲಾಗಿ ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

"(3) ಈ ನಿಯಮಗಳಲ್ಲಿ ಏನೇ ಒಳಗೊಂಡಿದ್ದರೂ, (2ಎ), (2ಬಿ) ಅಥವಾ (2ಸಿ) ಉಪ ನಿಯಮಗಳಲ್ಲಿ ಉಲ್ಲೇಖಿಸಿದ ಸರ್ಕಾರಿ ನೌಕರನು,–

(i) ಎರವಲು ಪಡೆದ ಪ್ರಾಧಿಕಾರಗಳಲ್ಲಿ ಸೇವೆ ಸಲ್ಲಿಸುತ್ತಿರುವಾಗ, ಯಾವುದೇ ದುರ್ನಡತೆ ಅಥವಾ ದುರ್ವರ್ತನೆಯನ್ನು ಎಸಗಿದ್ದಾನೆಂದು ಆರೋಪಿಸಲಾಗಿರುವ, ಅಂಥ ಸರ್ಕಾರಿ ನೌಕರನ ವಿರುದ್ಧ ಶಿಸ್ತು ವ್ಯವಹರಣೆಯನ್ನು ಪ್ರಾರಂಭಿಸುವುದಕ್ಕೆ ಮುಂಚೆ (2ಎ), (2ಬಿ) ಅಥವಾ (2ಸಿ) ಉಪನಿಯಮಗಳಲ್ಲಿ ನಿರ್ದಿಷ್ಟಪಡಿಸಿದ ಶಿಸ್ತು ಪ್ರಾಧಿಕಾರಿಯ ಅಧಿಕಾರ ವ್ಯಾಪ್ತಿಯಿಂದ ಹೊರಗೆ ಅವನನ್ನು ವರ್ಗಾವಣೆ ಮಾಡಿದ್ದರೆ, ಪ್ರತಿನಿಯೋಜಿಸಿದ್ದರೆ ಅಥವಾ ಅನ್ಯಥಾ ಸ್ಥಳನಿಯುಕ್ತಿ ಮಾಡಿದ್ದರೆ, ಅದೇ ಶಿಸ್ತು ಪ್ರಾಧಿಕಾರಿಯು ಶಿಸ್ತು ವ್ಯವಹರಣೆಗಳನ್ನು ಪ್ರಾರಂಭಿಸಲು ಮತ್ತು ಅಂಥ ಸರ್ಕಾರಿ ನೌಕರನ ಮೇಲಣ ಆರೋಪ ವಿಷಯಗಳ ವಿಚಾರಣೆಯನ್ನು ಮುಕ್ತಾಯಗೊಳಿಸಲು ಅಥವಾ ಮುಕ್ತಾಯಗೊಳಿಸುವಂತೆ ಮಾಡಲು ಮತ್ತು ಅಂಥ ಸರ್ಕಾರಿ ನೌಕರನಿಗೆ 8ನೇ ನಿಯಮದ (i) ರಿಂದ (ivಎ) ವರೆಗಿನ ಖಂಡಗಳಲ್ಲಿ ನಿರ್ದಿಷ್ಟಪಡಿಸಿದ ದಂಡನೆಗಳಲ್ಲಿ ಯಾವುದೇ ದಂಡನೆಯನ್ನು ವಿಧಿಸಲು ಅಧಿಕಾರ ಹೊಂದಿರತಕ್ಕದ್ದು.

(ii) ಶಿಸ್ತು ವ್ಯವಹರಣೆಯು ಇತ್ಯರ್ಥದಲ್ಲಿರುವಾಗ, ಅಂಥ ಸರ್ಕಾರಿ ನೌಕರನ ವಿರುದ್ಧ ಶಿಸ್ತು ವ್ಯವಹರಣೆಯನ್ನು ಪ್ರಾರಂಭಿಸಿದ (2ಎ), (2ಬಿ) ಅಥವಾ (2ಸಿ) ಉಪನಿಯಮದಲ್ಲಿ ಉಲ್ಲೇಖಿಸಿದ ಶಿಸ್ತು ಪ್ರಾಧಿಕಾರಿಯ ಅಧಿಕಾರ ವ್ಯಾಪ್ತಿಯಿಂದ ಹೊರಗೆ ಅಂಥ ಸರ್ಕಾರಿ ನೌಕರನನ್ನು ವರ್ಗಾವಣೆ ಮಾಡಿದ್ದರೆ, ಪ್ರತಿನಿಯೋಜಿಸಿದ್ದರೆ ಅಥವಾ ಅನ್ಯಥಾ ಸ್ಥಳನಿಯುಕ್ತಿ ಮಾಡಿದ್ದರೆ, ಅದೇ ಶಿಸ್ತು ಪ್ರಾಧಿಕಾರಿಯು ಈ ನಿಯಮಗಳಿಗೆ ಅನುಸಾರವಾಗಿ ಅಂಥ ಸರ್ಕಾರಿ ನೌಕರನ ಮೇಲಣ ಆರೋಪ ವಿಷಯಗಳ ವಿಚಾರಣೆಯನ್ನು ಮುಂದುವರೆಸತಕ್ಕದ್ದು ಮತ್ತು ಮುಕ್ತಾಯಗೊಳಿಸತಕ್ಕದ್ದು ಅಥವಾ ಮುಂದುವರೆಯುವಂತೆ ಅಥವಾ ಮುಕ್ತಾಯಗೊಳಿಸುವಂತೆ ಮಾಡತಕ್ಕದ್ದು ಮತ್ತು ಅಂಥ ಸರ್ಕಾರಿ ನೌಕರನಿಗೆ 8ನೇ ನಿಯಮದ (i) ರಿಂದ (ivಎ) ವರೆಗಿನ ಖಂಡಗಳಲ್ಲಿ ನಿರ್ದಿಷ್ಟಪಡಿಸಿದ ದಂಡನೆಗಳಲ್ಲಿ ಯಾವುದೇ ದಂಡನೆಯನ್ನು ವಿಧಿಸಲು ಅಧಿಕಾರ ಹೊಂದಿರತಕ್ಕದ್ದು:

ಪರಂತು, ಈ ಉಪನಿಯಮದ ಅಡಿಯಲ್ಲಿ, ಸಂದರ್ಭಾನುಸಾರ, ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಯು, ಕಮೀಷನರು ಅಥವಾ ವ್ಯವಸ್ಥಾಪಕ ನಿರ್ದೇಶಕರು ಹೊರಡಿಸಿದ ಆದೇಶದ ವಿರುದ್ಧ,–

(i) (2ಎ) ಉಪನಿಯಮದ (ii)ನೇ ಖಂಡದ (ಎ) ಉಪಖಂಡದಲ್ಲಿ ಅಥವಾ (2ಬಿ) ಉಪ ನಿಯಮದ (ii)ನೇ ಖಂಡದಲ್ಲಿ ಅಥವಾ (2ಸಿ) ಉಪನಿಯಮದ (ii)ನೇ ಖಂಡದಲ್ಲಿ ಉಲ್ಲೇಖಿಸಿದ ಸರ್ಕಾರಿ ನೌಕರನು ತಾನು ಯಾವ ಇಲಾಖೆಗೆ ಸೇರಿರುವನೋ ಆ ಇಲಾಖಾ ಮುಖ್ಯಸ್ಥರಿಗೆ;

(ii) (2ಎ) ಉಪನಿಯಮದ (ii)ನೇ ಖಂಡದ (ಬಿ) ಉಪಖಂಡದಲ್ಲಿ ಉಲ್ಲೇಖಿಸಿದ ವೈದ್ಯನು ಸರ್ಕಾರಕ್ಕೆ

– ಅಪೀಲನ್ನು ಸಲ್ಲಿಸತಕ್ಕದ್ದು".

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು
ಅವರ ಹೆಸರಿನಲ್ಲಿ,
**ಕೆ.ವಿ. ರಮಾ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ,
(ಸೇವಾ ನಿಯಮಗಳು –2).

**ಕರ್ನಾಟಕ ಸರ್ಕಾರ**

ಸಂಖ್ಯೆ. ಡಿಪಿಎಆರ್ 10 ಎಸ್‌ಡಿಇ 2006

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಧಾನಸೌಧ,
ಬೆಂಗಳೂರು, ದಿನಾಂಕ 25.01.2007

**ಅಧಿಸೂಚನೆ**

ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು, 1957ನ್ನು ಮತ್ತಷ್ಟು ತಿದ್ದುಪಡಿ ಮಾಡಲು ಈ ಮುಂದಿನ ನಿಯಮಗಳ ಕರಡನ್ನು, ಅದರಿಂದ ಬಾಧಿತರಾಗುವ ಸಂಭವವಿರುವ ಎಲ್ಲಾ ವ್ಯಕ್ತಿಗಳಿಂದ, ಸರ್ಕಾರಿ ರಾಜ್ಯಪತ್ರದಲ್ಲಿ ಅದನ್ನು ಪ್ರಕಟಿಸಿದ ದಿನಾಂಕದಿಂದ 15 ದಿನಗಳೊಳಗಾಗಿ ಆಕ್ಷೇಪಣೆಗಳನ್ನು ಮತ್ತು ಸಲಹೆಗಳನ್ನು ಆಹ್ವಾನಿಸಿ, ಕರ್ನಾಟಕ ರಾಜ್ಯ ಸಿವಿಲ್ ಸೇವಾ ಅಧಿನಿಯಮ, 1978 (ಕರ್ನಾಟಕ ಅಧಿನಿಯಮ 1990ರ 14)ರ 3ನೇ ಪ್ರಕರಣದ (2)ನೇ ಉಪಪ್ರಕರಣದ (ಎ) ಖಂಡದ ಮೂಲಕ ಅಗತ್ಯಪಡಿಸಲಾದಂತೆ, ದಿನಾಂಕ 14ನೇ ಡಿಸೆಂಬರ್ 2006ರ ಕರ್ನಾಟಕ ವಿಶೇಷ ರಾಜ್ಯಪತ್ರದ ಭಾಗ–IVಎ (ಪಿ.ಆರ್. ಸಂಖ್ಯೆ 1722) ರಲ್ಲಿ ಅಧಿಸೂಚನೆ ಸಂಖ್ಯೆ ಡಿಪಿಎಆರ್ 10 ಎಸ್‌ಡಿಇ 2006, ದಿನಾಂಕ 14ನೇ ಡಿಸೆಂಬರ್, 2006 ರಲ್ಲಿ ಪ್ರಕಟಿಸಿರುವುದರಿಂದ;

ಸದರಿ ರಾಜ್ಯಪತ್ರವನ್ನು 14.12.2006 ರಂದು ಸಾರ್ವಜನಿಕರಿಗೆ ಲಭ್ಯವಾಗುವಂತೆ ಮಾಡಿರುವುದರಿಂದ;

ಮತ್ತು, ಸದರಿ ಕರಡು ನಿಯಮಗಳ ಬಗ್ಗೆ ರಾಜ್ಯ ಸರ್ಕಾರಕ್ಕೆ ಯಾವ ಆಕ್ಷೇಪಣೆಗಳೂ ಮತ್ತು ಸಲಹೆಗಳೂ ಬಾರದಿರುವುದರಿಂದ;

ಈಗ ಕರ್ನಾಟಕ ರಾಜ್ಯ ಸಿವಿಲ್ ಸೇವಾ ಅಧಿನಿಯಮ, 1978ರ (ಕರ್ನಾಟಕ ಅಧಿನಿಯಮ ಸಂಖ್ಯೆ 1990ರ 14)ರ 8ನೇ ಪ್ರಕರಣದೊಂದಿಗೆ ಓದಿಕೊಂಡ 3ನೇ ಪ್ರಕರಣದ (1)ನೇ ಉಪಪ್ರಕರಣದಿಂದ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಈ ಮೂಲಕ ಈ ಮುಂದಿನ ನಿಯಮಗಳನ್ನು ರಚಿಸುತ್ತದೆ, ಎಂದರೆ:–

**1. ಚಿಕ್ಕ ಹೆಸರು ಮತ್ತು ಪ್ರಾರಂಭ.–** (1) ಈ ನಿಯಮಗಳನ್ನು ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) (24ನೇ ತಿದ್ದುಪಡಿ) ನಿಯಮಗಳು, 2006 ಎಂದು ಕರೆಯತಕ್ಕದ್ದು.

(2) ಅವು, ಸರ್ಕಾರಿ ರಾಜ್ಯಪತ್ರದಲ್ಲಿ ಅವುಗಳನ್ನು ಪ್ರಕಟಿಸಿದ ದಿನಾಂಕದಿಂದ ಜಾರಿಗೆ ಬರತಕ್ಕದ್ದು.

**2. 9ನೇ ನಿಯಮದ ತಿದ್ದುಪಡಿ.–** ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು, 1957 (ಇಲ್ಲಿ ಇನ್ನು ಮುಂದೆ ಸದರಿ ನಿಯಮಗಳೆಂದು ಉಲ್ಲೇಖಿಸಲಾಗಿದೆ)ರ 9ನೇ ನಿಯಮದಲ್ಲಿ (2)ನೇ ಉಪನಿಯಮದಲ್ಲಿ (ಎಎ) ಖಂಡದ ತರುವಾಯ ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

"(ಬಿ) (i) ಪ್ರಾದೇಶಿಕ ಆಯುಕ್ತರು, ತಹಶೀಲ್ದಾರರ ಮೇಲೆ ಮತ್ತು ಅದಕ್ಕೆ ಸಮನಾದ ಹುದ್ದೆಯನ್ನು ಹೊಂದಿರುವ ಅಧಿಕಾರಿಗಳ ಮೇಲೆ 8ನೇ ನಿಯಮದ (ii) ರಿಂದ (ivಎ) ವರೆಗಿನ ಖಂಡಗಳಲ್ಲಿ ನಿರ್ದಿಷ್ಟಪಡಿಸಿದ ದಂಡನೆಗಳಲ್ಲಿ ಯಾವುದೇ ದಂಡನೆಯನ್ನು ವಿಧಿಸಬಹುದು."

**3. 10ನೇ ನಿಯಮದ ತಿದ್ದುಪಡಿ.–** ಸದರಿ ನಿಯಮಗಳ 10ನೇ ನಿಯಮದಲ್ಲಿ, (8)ನೇ ಉಪನಿಯಮದಲ್ಲಿ, (ii)ನೇ ಖಂಡದ ಬದಲಾಗಿ ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

| | | |
|---|---|---|
| (ii) | ಕರ್ನಾಟಕ ಆಡಳಿತ ಸೇವೆಯ ಸಮೂಹ 'ಬಿ' ಅಧಿಕಾರಿಗಳು, ಎಂದರೆ, ತಹಸೀಲ್ದಾರರು ಮತ್ತು ಪ್ರಾದೇಶಿಕ ಆಯುಕ್ತರ ಆಡಳಿತ ನಿಯಂತ್ರಣದಲ್ಲಿರುವ ಸಂಬಂಧಿತ ಇಲಾಖೆಗಳಲ್ಲಿ ತತ್ಸಮಾನ ಹುದ್ದೆಗಳನ್ನು ಹೊಂದಿರುವ ಅಧಿಕಾರಿಗಳು | ಪ್ರಾದೇಶಿಕ ಆಯುಕ್ತರು |

**4. ಅನುಸೂಚಿ IIರ ತಿದ್ದುಪಡಿ.–** ಸದರಿ ನಿಯಮಗಳ ಅನುಸೂಚಿ II ರಲ್ಲಿ, "ಕಂದಾಯ ಇಲಾಖೆ" ಶೀರ್ಷಿಕೆ ಅಡಿಯಲ್ಲಿ ಇರುವ ನಮೂದುಗಳಿಗೆ ಬದಲಾಗಿ ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

| | | | | |
|---|---|---|---|---|
| ಉಪ ತಹಸೀಲ್ದಾರರು ಮತ್ತು ಶಿರಸ್ತೆದಾರರು | ಪ್ರಾದೇಶಿಕ ಆಯುಕ್ತರು | 1) ಜಿಲ್ಲಾಧಿಕಾರಿ | (ii)ರಿಂದ (ivಎ) | ಪ್ರಾದೇಶಿಕ ಆಯುಕ್ತರು |
| | | 2) ಹೆಚ್ಚುವರಿ ಆಯುಕ್ತರು (ಪ್ರಾದೇಶಿಕ ಆಯುಕ್ತರ ಕಚೇರಿಯಲ್ಲಿ ಕೆಲಸ ಮಾಡುತ್ತಿರುವ ಸಿಬ್ಬಂದಿಗೆ ಸಂಬಂಧಿಸಿದಂತೆ) | (ii)ರಿಂದ (ivಎ) | ಪ್ರಾದೇಶಿಕ ಆಯುಕ್ತರು |
| | | 3) ವಿಶೇಷ ಜಿಲ್ಲಾಧಿಕಾರಿ | (ii)ರಿಂದ (ivಎ) | ಪ್ರಾದೇಶಿಕ ಆಯುಕ್ತರು |
| | | ಪ್ರಾದೇಶಿಕ ಆಯುಕ್ತರು | (v)ರಿಂದ (viii) | ಸರ್ಕಾರ |
| ಎಲ್ಲಾ ಇತರ 'ಸಿ' ಸಮೂಹದ ಹುದ್ದೆಗಳು | ಜಿಲ್ಲಾಧಿಕಾರಿ | 1) ತಹಶೀಲ್ದಾರ್ | (ii)ರಿಂದ (ivಎ) | ಅಸಿಸ್ಟೆಂಟ್ ಕಮೀಷನರ್ |
| | | 2) ಜಿಲ್ಲಾಧಿಕಾರಿಯವರ ಕಚೇರಿ ಸಹಾಯಕ (ಆಡಳಿತ) (ಜಿಲ್ಲಾಧಿಕಾರಿಯ ಕಚೇರಿ ಸಿಬ್ಬಂದಿಗೆ ಸಂಬಂಧಪಟ್ಟಂತೆ) | (ii)ರಿಂದ (iii) | ಜಿಲ್ಲಾಧಿಕಾರಿ ಯವರ ಕೇಂದ್ರ ಕಾರ್ಯಸ್ಥಾನ ಸಹಾಯಕ |
| | | 3) ಅಸಿಸ್ಟೆಂಟ್ ಕಮೀಷನರ್ ಅವರ ಕಚೇರಿ ಸಿಬ್ಬಂದಿಗೆ ಸಂಬಂಧಪಟ್ಟಂತೆ | (ii)ರಿಂದ (ivಎ) | ಜಿಲ್ಲಾಧಿಕಾರಿ |
| | | 4) ಜಿಲ್ಲಾಧಿಕಾರಿಯವರ ಕೇಂದ್ರ ಕಾರ್ಯಸ್ಥಾನ ಸಹಾಯಕ (ಜಿಲ್ಲಾಧಿಕಾರಿಯವರ ಕಚೇರಿ ಸಿಬ್ಬಂದಿಗೆ ಸಂಬಂಧಪಟ್ಟಂತೆ) | (ii)ರಿಂದ (ivಎ) | ಜಿಲ್ಲಾಧಿಕಾರಿ |
| | | 5) ಹೆಚ್ಚುವರಿ ಆಯುಕ್ತರು (ಪ್ರಾದೇಶಿಕ ಆಯುಕ್ತರ ಕಚೇರಿ ಸಿಬ್ಬಂದಿಗೆ ಸಂಬಂಧಪಟ್ಟಂತೆ) | (ii)ರಿಂದ (ivಎ) | ಪ್ರಾದೇಶಿಕ ಆಯುಕ್ತರು |
| | | ಜಿಲ್ಲಾಧಿಕಾರಿ | (v)ರಿಂದ (viii) | ಪ್ರಾದೇಶಿಕ ಆಯುಕ್ತರು |

**5. ಅನುಸೂಚಿ IIIರ ತಿದ್ದುಪಡಿ.–** ಸದರಿ ನಿಯಮಗಳ ಅನುಸೂಚಿ III ರಲ್ಲಿ 'ಕಂದಾಯ ಇಲಾಖೆ' ಶೀರ್ಷಿಕೆ ಅಡಿಯಲ್ಲಿ ಇರುವ ನಮೂದುಗಳಿಗೆ ಬದಲಾಗಿ ಈ ಮುಂದಿನವುಗಳನ್ನು ಸೇರಿಸತಕ್ಕದ್ದು, ಎಂದರೆ,–

| | | | | |
|---|---|---|---|---|
| ಎಲ್ಲಾ 'ಡಿ' ಸಮೂಹದ ಹುದ್ದೆಗಳು | ಜಿಲ್ಲಾಧಿಕಾರಿ | 1) ತಹಶೀಲ್ದಾರ್/ ವಿಶೇಷ ತಹಶೀಲ್ದಾರ್<br><br>2) ಜಿಲ್ಲಾಧಿಕಾರಿಯ ಕೇಂದ್ರ ಕಾರ್ಯಸ್ಥಾನ ಸಹಾಯಕ (ಜಿಲ್ಲಾಧಿಕಾರಿಯವರ ಕಚೇರಿಯಲ್ಲಿರುವ ಸಿಬ್ಬಂದಿಗೆ ಸಂಬಂಧಪಟ್ಟಂತೆ)<br><br>3) ಅಸಿಸ್ಟೆಂಟ್ ಕಮೀಷನರ್ (ತಮ್ಮ ಕಚೇರಿಯಲ್ಲಿರುವ ಸಿಬ್ಬಂದಿಗೆ ಸಂಬಂಧಪಟ್ಟಂತೆ) | (i)ರಿಂದ (ivಎ)<br><br>(i)ರಿಂದ (ivಎ)<br><br>(i)ರಿಂದ (ivಎ) | ಅಸಿಸ್ಟೆಂಟ್ ಕಮೀಷನರ್<br><br>ಜಿಲ್ಲಾಧಿಕಾರಿ/ ವಿಶೇಷ ಜಿಲ್ಲಾಧಿಕಾರಿ<br><br>ಜಿಲ್ಲಾಧಿಕಾರಿ |
| | | 4) ಹೆಚ್ಚುವರಿ ಆಯುಕ್ತರು, ಪ್ರಾದೇಶಿಕ ಆಯುಕ್ತರ ಕಚೇರಿ (ಪ್ರಾದೇಶಿಕ ಆಯುಕ್ತರ ಕಚೇರಿಯಲ್ಲಿ ಕೆಲಸ ಮಾಡುತ್ತಿರುವ ಸಿಬ್ಬಂದಿಗೆ ಸಂಬಂಧಪಟ್ಟಂತೆ) | (i)ರಿಂದ (ivಎ) | ಪ್ರಾದೇಶಿಕ ಆಯುಕ್ತರು |
| | | 5) ವಿಶೇಷ ಜಿಲ್ಲಾಧಿಕಾರಿ<br><br>ಜಿಲ್ಲಾಧಿಕಾರಿ | (i)ರಿಂದ (ivಎ)<br><br>(ivಎ) ಯಿಂದ (viii) | ಜಿಲ್ಲಾಧಿಕಾರಿ<br><br>ಪ್ರಾದೇಶಿಕ ಆಯುಕ್ತರು |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು
ಅವರ ಹೆಸರಿನಲ್ಲಿ,
**(ಪಿ. ಮಾರ್ಕಂಡೇಯ)**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ
(ಸೇವಾ ನಿಯಮಗಳು–2).

**ಕರ್ನಾಟಕ ಸರ್ಕಾರ**

ಸಂಖ್ಯೆ. ಡಿಪಿಎಆರ್ 13 ಎಸ್‌ಡಿಇ 2006

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಧಾನಸೌಧ,
ಬೆಂಗಳೂರು, ದಿನಾಂಕ 03.04.2007

**ಸೇರ್ಪಡೆ**

ಅಧಿಸೂಚನೆ ಸಂಖ್ಯೆ. ಡಿಪಿಎಆರ್ 3 ಎಸ್‌ಡಿಇ 2004, ದಿನಾಂಕ 11.11.2005 ರಲ್ಲಿ ಪ್ರಕಟಿಸಿದ ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) (18ನೇ ತಿದ್ದುಪಡಿ) ನಿಯಮಗಳು, 2005ರ 2ನೇ ನಿಯಮದಲ್ಲಿ, ಅನುಸೂಚಿ II ರಲ್ಲಿ, ಅಂಕಣ 1 ರಲ್ಲಿನ IIಬಿ ಮತ್ತು IIIಬಿ ನಮೂದುಗಳ ಎದುರಿಗೆ ಇರುವ 'ವಾಹನ ಚಾಲಕ' ಎಂಬ ಪದದ ತರುವಾಯ "ವಾರ್ಡರ್ (ನರ್ಸಿಂಗ್)" ಎಂಬ ಪದಗಳನ್ನು ಸೇರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು
ಅವರ ಹೆಸರಿನಲ್ಲಿ,

(ಪಿ. ಮಾರ್ಕಂಡೇಯ)
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ.
(ಸೇವಾ ನಿಯಮಗಳು – 2).

**ಕರ್ನಾಟಕ ಸರ್ಕಾರ**

ಸಂಖ್ಯೆ. ಡಿಪಿಎಆರ್ 12 ಎಸ್‌ಡಿಇ 2006

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಧಾನಸೌಧ,
ಬೆಂಗಳೂರು, ದಿನಾಂಕ 04.05.2007

**ಅಧಿಸೂಚನೆ**

ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು, 1957ನ್ನು ಮತ್ತಷ್ಟು ತಿದ್ದುಪಡಿ ಮಾಡಲು ಈ ಮುಂದಿನ ನಿಯಮಗಳ ಕರಡನ್ನು, ಅದರಿಂದ ಬಾಧಿತರಾಗುವ ಸಂಭವವಿರುವ ಎಲ್ಲಾ ವ್ಯಕ್ತಿಗಳಿಂದ, ಸರ್ಕಾರಿ ರಾಜ್ಯಪತ್ರದಲ್ಲಿ ಅದನ್ನು ಪ್ರಕಟಿಸಿದ ದಿನಾಂಕದಿಂದ 15 ದಿನಗಳೊಳಗಾಗಿ ಆಕ್ಷೇಪಣೆಗಳನ್ನು ಮತ್ತು ಸಲಹೆಗಳನ್ನು ಆಹ್ವಾನಿಸಿ, ಕರ್ನಾಟಕ ರಾಜ್ಯ ಸಿವಿಲ್ ಸೇವಾ ಅಧಿನಿಯಮ, 1978 (ಕರ್ನಾಟಕ ಅಧಿನಿಯಮ 1990ರ 14)ರ 3ನೇ ಪ್ರಕರಣದ (2)ನೇ ಉಪಪ್ರಕರಣದ (ಎ) ಖಂಡದ ಮೂಲಕ ಅಗತ್ಯಪಡಿಸಲಾದಂತೆ, ದಿನಾಂಕ 22ನೇ ಮಾರ್ಚ್ 2007ರ ಕರ್ನಾಟಕ ವಿಶೇಷ ರಾಜ್ಯಪತ್ರದ ಭಾಗ–IVಎ (ಪಿ.ಆರ್. ಸಂಖ್ಯೆ. 547) ರಲ್ಲಿ ಅಧಿಸೂಚನೆ ಸಂಖ್ಯೆ ಡಿಪಿಎಆರ್ 12 ಎಸ್‌ಡಿಇ 2006, ದಿನಾಂಕ 21ನೇ ಮಾರ್ಚ್ 2007 ರಲ್ಲಿ ಪ್ರಕಟಿಸಿರುವುದರಿಂದ;

ಸದರಿ ರಾಜ್ಯಪತ್ರವನ್ನು 22.3.2007 ರಂದು ಸಾರ್ವಜನಿಕರಿಗೆ ಲಭ್ಯವಾಗುವಂತೆ ಮಾಡಿರುವುದರಿಂದ;

ಮತ್ತು, ಸದರಿ ಕರಡು ನಿಯಮಗಳ ಬಗ್ಗೆ ರಾಜ್ಯ ಸರ್ಕಾರಕ್ಕೆ ಯಾವ ಆಕ್ಷೇಪಣೆಗಳೂ ಅಥವಾ ಸಲಹೆಗಳೂ ಬಾರದಿರುವುದರಿಂದ;

ಈಗ ಕರ್ನಾಟಕ ರಾಜ್ಯ ಸಿವಿಲ್ ಸೇವಾ ಅಧಿನಿಯಮ, 1978ರ (ಕರ್ನಾಟಕ ಅಧಿನಿಯಮ ಸಂಖ್ಯೆ 1990ರ 14) 8ನೇ ಪ್ರಕರಣದೊಂದಿಗೆ ಓದಿಕೊಂಡ 3ನೇ ಪ್ರಕರಣದ (1)ನೇ ಉಪಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಈ ಮೂಲಕ ಈ ಮುಂದಿನ ನಿಯಮಗಳನ್ನು ರಚಿಸುತ್ತದೆ, ಎಂದರೆ:–

**ನಿಯಮಗಳು**

**1. ಚಿಕ್ಕ ಹೆಸರು ಮತ್ತು ಪ್ರಾರಂಭ.–** (1) ಈ ನಿಯಮಗಳನ್ನು ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) (25ನೇ ತಿದ್ದುಪಡಿ) ನಿಯಮಗಳು, 2007 ಎಂದು ಕರೆಯತಕ್ಕದ್ದು.

(2) ಅವು, ಸರ್ಕಾರಿ ರಾಜ್ಯಪತ್ರದಲ್ಲಿ ಅವುಗಳನ್ನು ಪ್ರಕಟಿಸಿದ ದಿನಾಂಕದಿಂದ ಜಾರಿಗೆ ಬರತಕ್ಕದ್ದು.

**2. ಅನುಸೂಚಿ IIರ ತಿದ್ದುಪಡಿ.–** ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು, 1957ರ ಅನುಸೂಚಿ **II** ರಲ್ಲಿ "ಸಹಕಾರ ಇಲಾಖೆ" ಶೀರ್ಷಿಕೆ ಅಡಿಯಲ್ಲಿ ಇರುವ "ಹಿರಿಯ ದರ್ಜೆಯ ಲೆಕ್ಕ ಪರಿಶೋಧಕರು", "ಹಿರಿಯ ಲೆಕ್ಕ ಪರಿಶೋಧಕರು", "ಕಿರಿಯ ಲೆಕ್ಕ ಪರಿಶೋಧಕರು" ಎಂಬ ಪದಗಳು ಬರುವ ಕಡೆಯಲ್ಲೆಲ್ಲಾ ಅವುಗಳನ್ನು ಬಿಟ್ಟುಬಿಡತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು
ಅವರ ಹೆಸರಿನಲ್ಲಿ,
**ಪಿ. ಮಾರ್ಕಂಡೇಯ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ
(ಸೇವಾ ನಿಯಮಗಳು –2).

**ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ ಡಿಪಿಎಆರ್ 17 ಎಸ್‌ಡಿಇ 2007, ಬೆಂಗಳೂರು ದಿನಾಂಕ 26ನೇ ಡಿಸೆಂಬರ್ 2007**

ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು, 1957ನ್ನು ಮತ್ತಷ್ಟು ತಿದ್ದುಪಡಿ ಮಾಡಲು ಈ ಮುಂದಿನ ನಿಯಮಗಳ ಕರಡನ್ನು, ಅದರಿಂದ ಬಾಧಿತರಾಗುವ ಸಂಭವವಿರುವ ಎಲ್ಲಾ ವ್ಯಕ್ತಿಗಳಿಂದ, ಸರ್ಕಾರಿ ರಾಜ್ಯಪತ್ರದಲ್ಲಿ ಅದನ್ನು ಪ್ರಕಟಿಸಿದ ದಿನಾಂಕದಿಂದ 15 ದಿನಗಳೊಳಗಾಗಿ ಆಕ್ಷೇಪಣೆಗಳನ್ನು ಮತ್ತು ಸಲಹೆಗಳನ್ನು ಆಹ್ವಾನಿಸಿ, ಕರ್ನಾಟಕ ರಾಜ್ಯ ಸಿವಿಲ್ ಸೇವಾ ಅಧಿನಿಯಮ, 1978 (ಕರ್ನಾಟಕ ಅಧಿನಿಯಮ 1990ರ 14)ರ 3ನೇ ಪ್ರಕರಣದ (2)ನೇ ಉಪಪ್ರಕರಣದ (ಎ) ಖಂಡದ ಮೂಲಕ ಅಗತ್ಯಪಡಿಸಲಾದಂತೆ, ದಿನಾಂಕ 27ನೇ ಅಕ್ಟೋಬರ್ 2007ರ ಕರ್ನಾಟಕ ವಿಶೇಷ ರಾಜ್ಯಪತ್ರದ ಭಾಗ–IVಎ (ಪಿ.ಆರ್. ಸಂಖ್ಯೆ. 1958) ರಲ್ಲಿ ಅಧಿಸೂಚನೆ ಸಂಖ್ಯೆ ಡಿಪಿಎಆರ್ 17 ಎಸ್‌ಡಿಇ 2007, ದಿನಾಂಕ 27ನೇ ಅಕ್ಟೋಬರ್ 2007 ರಲ್ಲಿ ಪ್ರಕಟಿಸಿರುವುದರಿಂದ;

ಸದರಿ ರಾಜ್ಯಪತ್ರವನ್ನು 27.10.2007 ರಂದು ಸಾರ್ವಜನಿಕರಿಗೆ ಲಭ್ಯವಾಗುವಂತೆ ಮಾಡಿರುವುದರಿಂದ;

ಮತ್ತು ಸದರಿ ಕರಡು ನಿಯಮಗಳ ಬಗ್ಗೆ ರಾಜ್ಯ ಸರ್ಕಾರಕ್ಕೆ ಯಾವ ಆಕ್ಷೇಪಣೆಗಳೂ ಮತ್ತು ಸಲಹೆಗಳೂ ಬಾರದಿರುವುದರಿಂದ;

ಈಗ ಕರ್ನಾಟಕ ರಾಜ್ಯ ಸಿವಿಲ್ ಸೇವಾ ಅಧಿನಿಯಮ, 1978ರ (ಕರ್ನಾಟಕ ಅಧಿನಿಯಮ ಸಂಖ್ಯೆ 1990ರ 14) ರ 8ನೇ ಪ್ರಕರಣದೊಂದಿಗೆ ಓದಿಕೊಂಡ 3ನೇ ಪ್ರಕರಣದ (1)ನೇ ಉಪಪ್ರಕರಣದಿಂದ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಈ ಮೂಲಕ ಈ ಮುಂದಿನ ನಿಯಮಗಳನ್ನು ರಚಿಸುತ್ತದೆ, ಎಂದರೆ:–

**ನಿಯಮಗಳು**

**1. ಚಿಕ್ಕ ಹೆಸರು ಮತ್ತು ಪ್ರಾರಂಭ.–** ಈ ನಿಯಮಗಳನ್ನು ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) (25ನೇ ತಿದ್ದುಪಡಿ) ನಿಯಮಗಳು, 2007 ಎಂದು ಕರೆಯತಕ್ಕದ್ದು.

(2) ಅವು, ಸರ್ಕಾರಿ ರಾಜ್ಯಪತ್ರದಲ್ಲಿ ಅವುಗಳನ್ನು ಪ್ರಕಟಿಸಿದ ದಿನಾಂಕದಿಂದ ಜಾರಿಗೆ ಬರತಕ್ಕದ್ದು.

**2. 5ನೇ ನಿಯಮದ ತಿದ್ದುಪಡಿ.–** ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು, 1957ರ (ಇಲ್ಲಿ ಇನ್ನು ಮುಂದೆ ಸದರಿ ನಿಯಮಗಳೆಂದು ಉಲ್ಲೇಖಿಸಲಾಗಿದೆ) 5ನೇ ನಿಯಮದಲ್ಲಿ, (3)ನೇ ಉಪನಿಯಮದ ಬದಲಾಗಿ ಈ ಮುಂದಿನದನ್ನು ಸೇರಿಸತಕ್ಕದ್ದು ಮತ್ತು 2005ರ ಜುಲೈ 1 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆಯೆಂದು ಭಾವಿಸತಕ್ಕದ್ದು, ಎಂದರೆ:–

"(3) (ಎ) ರಾಜ್ಯ ಸಿವಿಲ್ ಸೇವೆಗಳ ಸಮೂಹ "ಎ"ಯು ರೂ. 14050–350–14400–400–16800–450–19500–525–22650–600–25050ರ ಮತ್ತು ಅದಕ್ಕೂ ಮೇಲ್ಪಟ್ಟ ವೇತನ ಶ್ರೇಣಿಗಳನ್ನು ಹೊಂದಿರುವ ಹುದ್ದೆಗಳನ್ನು ಒಳಗೊಂಡಿರತಕ್ಕದ್ದು.

(ಬಿ) ರಾಜ್ಯ ಸಿವಿಲ್ ಸೇವೆಗಳ ಸಮೂಹ "ಬಿ"ಯು ರೂ. 10800–300–12300–350–14400–400–16800–450–19500–525–20025ರ ಮತ್ತು ಅದಕ್ಕೂ ಮೇಲ್ಪಟ್ಟ ವೇತನ ಶ್ರೇಣಿಗಳನ್ನು ಆದರೆ ರೂ. 14050–350–14400–400–16800–450–19500–525–22650–600–25025 ಕ್ಕಿಂತ ಕೆಳಗಿನ ವೇತನ ಶ್ರೇಣಿಯನ್ನು ಹೊಂದಿರುವ ಹುದ್ದೆಗಳನ್ನು ಒಳಗೊಂಡಿರತಕ್ಕದ್ದು.

(ಸಿ) ರಾಜ್ಯ ಸಿವಿಲ್ ಸೇವೆಗಳ ಸಮೂಹ "ಸಿ"ಯು ರೂ. 4800–100–6000–125–6500–150–7100–175–7275ರ ವೇತನ ಶ್ರೇಣಿಗಿಂತ ಮೇಲ್ಪಟ್ಟ ವೇತನ ಶ್ರೇಣಿಗಳನ್ನು, ಆದರೆ 10800–300–12300–350–14400–400–16800–450–19500–525–20025 ಕ್ಕಿಂತ ಕೆಳಗಿನ ವೇತನ ಶ್ರೇಣಿಯನ್ನು ಹೊಂದಿರುವ, ಆದರೆ ಅನುಸೂಚಿ IV ರಲ್ಲಿ ನಿರ್ದಿಷ್ಟಪಡಿಸಿರುವ ಹುದ್ದೆಗಳನ್ನು ಹೊರತುಪಡಿಸಿದ ಹುದ್ದೆಗಳನ್ನು ಒಳಗೊಂಡಿರತಕ್ಕದ್ದು.

(ಡಿ) ರಾಜ್ಯ ಸಿವಿಲ್ ಸೇವೆಗಳ ಸಮೂಹ "ಡಿ"ಯು ಅನುಸೂಚಿ IV ರಲ್ಲಿ ನಿರ್ದಿಷ್ಟಪಡಿಸಿರುವ ಹುದ್ದೆಗಳನ್ನು ಮತ್ತು ರೂ. 4800–100–6000–125–6500–150–7100–175–7275ರ ವೇತನ ಶ್ರೇಣಿಯನ್ನು ಹೊಂದಿರುವ ಹುದ್ದೆಗಳನ್ನು ಒಳಗೊಂಡಿರತಕ್ಕದ್ದು.

**ವಿವರಣೆ.–** ಈ ಉಪನಿಯಮದ ಉದ್ದೇಶಗಳಿಗಾಗಿ "ವೇತನ ಶ್ರೇಣಿ" ಎಂದರೆ ಕರ್ನಾಟಕ ಸಿವಿಲ್ ಸೇವಾ (ಪರಿಷ್ಕೃತ ವೇತನ) ನಿಯಮಗಳು, 2007 ರಲ್ಲಿ ಮತ್ತು ಅದಕ್ಕೆ ಸಂಬಂಧಿಸಿದ ಆದೇಶಗಳಲ್ಲಿ ಹೇಳಿರುವ ವಿವಿಧ ಹುದ್ದೆಗಳಿಗೆ ಸಂಬಂಧಿಸಿದಂತೆ ನಿಗದಿಪಡಿಸಿದ ಪರಿಷ್ಕೃತ ವೇತನ ಶ್ರೇಣಿ.

**3. 9ನೇ ನಿಯಮದ ತಿದ್ದುಪಡಿ.–** ಸದರಿ ನಿಯಮಗಳ 9ನೇ ನಿಯಮದ (2)ನೇ ಉಪನಿಯಮದಲ್ಲಿ,–

(i) (ಬಿಬಿ) ಖಂಡದಲ್ಲಿ, "4700–6400 ರೂ.ಗಳಿಗಿಂತ ಕಡಿಮೆಯಿಲ್ಲದ" ಎಂಬ ಪದಗಳಿಗೆ ಮತ್ತು ಅಂಕಿಗಳಿಗೆ ಬದಲಾಗಿ "24450–31800 ರೂ.ಗಳಿಗಿಂತ ಕಡಿಮೆಯಿಲ್ಲದ" ಎಂಬ ಪದಗಳನ್ನು ಮತ್ತು ಅಂಕಿಗಳನ್ನು ಮತ್ತು "2600–4575 ರೂ.ಗಳಿಗಿಂತ ಹೆಚ್ಚಲ್ಲದ" ಎಂಬ ಪದಗಳಿಗೆ ಮತ್ತು ಅಂಕಿಗಳಿಗೆ ಬದಲಾಗಿ "15200–25650 ರೂ.ಗಳಿಗಿಂತ ಹೆಚ್ಚಲ್ಲದ" ಎಂಬ ಪದಗಳನ್ನು ಮತ್ತು ಅಂಕಿಗಳನ್ನು;

(ii) (ಬಿಬಿಬಿ) ಖಂಡದಲ್ಲಿ, "4700–6400 ರೂ.ಗಳಿಗಿಂತ ಕಡಿಮೆ" ಎಂಬ ಪದಗಳಿಗೆ ಮತ್ತು ಅಂಕಿಗಳಿಗೆ ಬದಲಾಗಿ "24450–31800 ರೂ.ಗಳಿಗಿಂತ ಕಡಿಮೆ" ಎಂಬ ಪದಗಳನ್ನು ಮತ್ತು ಅಂಕಿಗಳನ್ನು;

(iii) (ಬಿಬಿಬಿ–1) ಖಂಡದಲ್ಲಿ "ರೂ. 10620–14960ರ ವೇತನ ಶ್ರೇಣಿಯಲ್ಲಿರುವ" ಎಂಬ ಪದಗಳಿಗೆ ಮತ್ತು ಅಂಕಿಗಳಿಗೆ ಬದಲಾಗಿ "ರೂ. 20025–28275ರ ವೇತನ ಶ್ರೇಣಿಯಲ್ಲಿರುವ" ಎಂಬ ಪದಗಳನ್ನು ಮತ್ತು ಅಂಕಿಗಳನ್ನು;

– ಸೇರಿಸತಕ್ಕದ್ದು ಮತ್ತು 2005ರ ಜುಲೈ 1 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ ಎಂದು ಭಾವಿಸತಕ್ಕದ್ದು.

**4. ಅನುಸೂಚಿ II ಮತ್ತು IIIರ ತಿದ್ದುಪಡಿ.–** ಸದರಿ ನಿಯಮಗಳ ಅನುಸೂಚಿ II ರಲ್ಲಿ ಮತ್ತು III ರಲ್ಲಿ "ಸರಕು ಖರೀದಿ ಇಲಾಖೆ ಮತ್ತು ಅದಕ್ಕೆ ಸಂಬಂಧಿಸಿದ ನಮೂದುಗಳನ್ನು 2004ರ ಜನವರಿ 16 ರಿಂದ ಜಾರಿಗೆ ಬರುವಂತೆ ಬಿಟ್ಟುಬಿಡಲಾಗಿದೆ ಎಂದು ಭಾವಿಸತಕ್ಕದ್ದು.

ಭಾರತದ ರಾಷ್ಟ್ರಪತಿಯವರ ಆದೇಶಾನುಸಾರ ಮತ್ತು
ಅವರ ಹೆಸರಿನಲ್ಲಿ,

**(ಪಿ. ಮಾರ್ಕಂಡೇಯ)**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ,
(ಸೇವಾ ನಿಯಮಗಳು– 2).

**ಕರ್ನಾಟಕ ಸರ್ಕಾರ**

ಸಂ. ಡಿಪಿಎಆರ್ 15 ಎಸ್‌ಡಿಇ 2007,

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಧಾನ ಸೌಧ,
ಬೆಂಗಳೂರು ದಿನಾಂಕ 28ನೇ ಜನವರಿ, 2008

**ಅಧಿಸೂಚನೆ**

ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು, 1957ನ್ನು ಮತ್ತಷ್ಟು ತಿದ್ದುಪಡಿ ಮಾಡಲು ಈ ಮುಂದಿನ ನಿಯಮಗಳ ಕರಡನ್ನು, ಅದರಿಂದ ಬಾಧಿತರಾಗುವ ಸಂಭವವಿರುವ ಎಲ್ಲಾ ವ್ಯಕ್ತಿಗಳಿಂದ, ಸರ್ಕಾರಿ ರಾಜ್ಯಪತ್ರದಲ್ಲಿ ಅದನ್ನು ಪ್ರಕಟಿಸಿದ ದಿನಾಂಕದಿಂದ 15 ದಿನಗಳೊಳಗಾಗಿ ಆಕ್ಷೇಪಣೆಗಳನ್ನು ಮತ್ತು ಸಲಹೆಗಳನ್ನು ಆಹ್ವಾನಿಸಿ, ಕರ್ನಾಟಕ ರಾಜ್ಯ ಸಿವಿಲ್ ಸೇವಾ ಅಧಿನಿಯಮ, 1978 (ಕರ್ನಾಟಕ ಅಧಿನಿಯಮ 1990ರ 14)ರ 3ನೇ ಪ್ರಕರಣದ (2)ನೇ ಉಪಪ್ರಕರಣದ (ಎ) ಖಂಡದ ಮೂಲಕ ಅಗತ್ಯಪಡಿಸಲಾದಂತೆ, ದಿನಾಂಕ 2ನೇ ಜನವರಿ 2008ರ ಕರ್ನಾಟಕ ವಿಶೇಷ ರಾಜ್ಯಪತ್ರದ ಭಾಗ–IVಎ (ಪಿ.ಆರ್. ಸಂಖ್ಯೆ. 9) ರಲ್ಲಿ ಅಧಿಸೂಚನೆ ಸಂಖ್ಯೆ ಡಿಪಿಎಆರ್ 15 ಎಸ್‌ಡಿಇ 2007, ದಿನಾಂಕ 1ನೇ ಜನವರಿ 2008 ರಲ್ಲಿ ಪ್ರಕಟಿಸಿರುವುದರಿಂದ;

ಸದರಿ ರಾಜ್ಯಪತ್ರವನ್ನು 2.1.2008 ರಂದು ಸಾರ್ವಜನಿಕರಿಗೆ ಲಭ್ಯವಾಗುವಂತೆ ಮಾಡಿರುವುದರಿಂದ;

ಮತ್ತು ಸದರಿ ಕರಡು ನಿಯಮಗಳ ಬಗ್ಗೆ ರಾಜ್ಯ ಸರ್ಕಾರಕ್ಕೆ ಯಾವ ಆಕ್ಷೇಪಣೆಗಳೂ ಮತ್ತು ಸಲಹೆಗಳೂ ಬಾರದಿರುವುದರಿಂದ;

ಈಗ ಕರ್ನಾಟಕ ರಾಜ್ಯ ಸಿವಿಲ್ ಸೇವಾ ಅಧಿನಿಯಮ, 1978 (ಕರ್ನಾಟಕ ಅಧಿನಿಯಮ ಸಂ. 1990ರ 14)ರ 8ನೇ ಪ್ರಕರಣದೊಂದಿಗೆ ಓದಿಕೊಂಡ 3ನೇ ಪ್ರಕರಣದ (1)ನೇ ಉಪಪ್ರಕರಣದಿಂದ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಈ ಮೂಲಕ ಈ ಮುಂದಿನ ನಿಯಮಗಳನ್ನು ರಚಿಸುತ್ತದೆ, ಎಂದರೆ:–

**ನಿಯಮಗಳು**

**1. ಹೆಸರು ಮತ್ತು ಪ್ರಾರಂಭ.–** ಈ ನಿಯಮಗಳನ್ನು ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) (26ನೇ ತಿದ್ದುಪಡಿ) ನಿಯಮಗಳು, 2007 ಎಂದು ಕರೆಯತಕ್ಕದ್ದು.

(2) ಅವು, ಸರ್ಕಾರಿ ರಾಜ್ಯಪತ್ರದಲ್ಲಿ ಅವುಗಳನ್ನು ಪ್ರಕಟಿಸಿದ ದಿನಾಂಕದಿಂದ ಜಾರಿಗೆ ಬರತಕ್ಕದ್ದು.

**2. ಅನುಸೂಚಿ IIರ ತಿದ್ದುಪಡಿ.–** ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು, 1957 (ಇಲ್ಲಿ ಇನ್ನು ಮುಂದೆ ಸದರಿ ನಿಯಮಗಳೆಂದು ಉಲ್ಲೇಖಿಸಲಾಗಿದೆ) ರ ಅನುಸೂಚಿ II ರಲ್ಲಿ, "ಸಹಕಾರ ಲೆಕ್ಕ ಪರಿಶೋಧನಾ ಇಲಾಖೆ" ಶೀರ್ಷಿಕೆ ಮತ್ತು ಅದಕ್ಕೆ ಸಂಬಂಧಿಸಿದ ನಮೂದುಗಳ ತರುವಾಯ ಈ ಮುಂದಿನವುಗಳನ್ನು ಸೇರಿಸತಕ್ಕದ್ದು, ಎಂದರೆ:–

**ಪದವಿಪೂರ್ವ ಶಿಕ್ಷಣ ಇಲಾಖೆಯ ಆಯುಕ್ತರ/ ನಿರ್ದೇಶಕರ ಕಚೇರಿ**

| 1 | 2 | 3 | 4 | 5 |
|---|---|---|---|---|
| ಅಧೀಕ್ಷಕರು, ಪ್ರಥಮ ದರ್ಜೆ ಸಹಾಯಕರು, ಶೀಘ್ರಲಿಪಿಗಾರರು, ದ್ವಿತೀಯ ದರ್ಜೆ ಸಹಾಯಕರು, ಹಿರಿಯ ಬೆರಳಚ್ಚುಗಾರರು, ಗುಮಾಸ್ತ– ಹಾಗೂ– ಬೆರಳಚ್ಚುಗಾರ, ವಾಹನ ಚಾಲಕರು | ಪದವಿಪೂರ್ವ ಶಿಕ್ಷಣ ಇಲಾಖೆಯ ಆಯುಕ್ತರು/ ನಿರ್ದೇಶಕರು | ಪದವಿಪೂರ್ವ ಶಿಕ್ಷಣ ಇಲಾಖೆಯ ಜಂಟಿ ನಿರ್ದೇಶಕರು (ಕೇಂದ್ರ ಕಚೇರಿ) | (ii) ರಿಂದ (ivಎ) | ಪದವಿಪೂರ್ವ ಶಿಕ್ಷಣ ಇಲಾಖೆಯ ಆಯುಕ್ತರು/ ನಿರ್ದೇಶಕರು |
| | | ಪದವಿಪೂರ್ವ ಶಿಕ್ಷಣ ಇಲಾಖೆಯ ಆಯುಕ್ತರು/ ನಿರ್ದೇಶಕರು | (v) ರಿಂದ (viii) | ಸರ್ಕಾರ |
| **ಪದವಿಪೂರ್ವ ಶಿಕ್ಷಣ ಇಲಾಖೆಯ ಆಯುಕ್ತರ/ ನಿರ್ದೇಶಕರ ನಿಯಂತ್ರಣದಲ್ಲಿ ಬರುವ ಕಚೇರಿಗಳು** | | | | |
| ಅಧೀಕ್ಷಕರು, ಪ್ರಥಮ ದರ್ಜೆ ಸಹಾಯಕರು, ಹಿರಿಯ ಬೆರಳಚ್ಚುಗಾರರು, ಗುಮಾಸ್ತ–ಹಾಗೂ ಬೆರಳಚ್ಚುಗಾರ ಮತ್ತು ವಾಹನ ಚಾಲಕರು | ಪದವಿಪೂರ್ವ ಶಿಕ್ಷಣ ಇಲಾಖೆಯ ಆಯುಕ್ತರು/ ನಿರ್ದೇಶಕರು | ಪದವಿಪೂರ್ವ ಶಿಕ್ಷಣ ಇಲಾಖೆಯ ಜಂಟಿನಿರ್ದೇಶಕರು (ಕೇಂದ್ರ ಕಚೇರಿ) | (ii) ರಿಂದ (ivಎ) | ಪದವಿಪೂರ್ವ ಶಿಕ್ಷಣ ಇಲಾಖೆಯ ಆಯುಕ್ತರು/ ನಿರ್ದೇಶಕರು |
| | | ಪದವಿಪೂರ್ವ ಶಿಕ್ಷಣ ಇಲಾಖೆಯ ಆಯುಕ್ತರು/ ನಿರ್ದೇಶಕರು | (v) ರಿಂದ (viii) | ಸರ್ಕಾರ |

**3. ಅನುಸೂಚಿ IIIರ ತಿದ್ದುಪಡಿ.–** ಸದರಿ ನಿಯಮಗಳ ಅನುಸೂಚಿ III ರಲ್ಲಿ "ಸಹಕಾರಿ ಲೆಕ್ಕ ಪರಿಶೋಧನಾ ಇಲಾಖೆ" ಶೀರ್ಷಿಕೆ ಮತ್ತು ಅದಕ್ಕೆ ಸಂಬಂಧಿಸಿದ ನಮೂದುಗಳ ತರುವಾಯ, ಈ ಮುಂದಿನವುಗಳನ್ನು ಸೇರಿಸತಕ್ಕದ್ದು, ಎಂದರೆ:–

**ಪದವಿಪೂರ್ವ ಶಿಕ್ಷಣ ಇಲಾಖೆಯ ಆಯುಕ್ತರ/ ನಿರ್ದೇಶಕರ ಕಚೇರಿ**

| 1 | 2 | 3 | 4 | 5 |
|---|---|---|---|---|
| ಎಲ್ಲಾ 'ಡಿ' ಸಮೂಹದ ಹುದ್ದೆಗಳು | ಜಂಟಿ ನಿರ್ದೇಶಕರು (ಆಡಳಿತ) (ಕೇಂದ್ರ ಕಚೇರಿ) | ಪದವಿಪೂರ್ವ ಶಿಕ್ಷಣ ಇಲಾಖೆಯ ಸಹಾಯಕ ನಿರ್ದೇಶಕರು | (i) ರಿಂದ (ivಎ) | ಜಂಟಿನಿರ್ದೇಶಕರು (ಆಡಳಿತ) (ಕೇಂದ್ರ ಕಚೇರಿ) |
| | | ಜಂಟಿನಿರ್ದೇಶಕರು (ಆಡಳಿತ) (ಕೇಂದ್ರ ಕಚೇರಿ) | (v) ರಿಂದ (viii) | ಪದವಿಪೂರ್ವ ಶಿಕ್ಷಣ ಇಲಾಖೆಯ ಆಯುಕ್ತರು/ ನಿರ್ದೇಶಕರು |
| **ಪದವಿಪೂರ್ವ ಶಿಕ್ಷಣ ಇಲಾಖೆಯ ಆಯುಕ್ತರ/ ನಿರ್ದೇಶಕರ ನಿಯಂತ್ರಣದಲ್ಲಿ ಬರುವ ಕಚೇರಿಗಳು** | | | | |
| ಎಲ್ಲಾ 'ಡಿ' ಸಮೂಹದ ಹುದ್ದೆಗಳು | ಉಪ ನಿರ್ದೇಶಕರು (ಆಡಳಿತ) (ಕೇಂದ್ರ ಕಚೇರಿ) | ಪ್ರಾಂಶುಪಾಲರು ಸರ್ಕಾರಿ ಪದವಿಪೂರ್ವ ಕಾಲೇಜು | (i) ರಿಂದ (ivಎ) | ಸಂಬಂಧಪಟ್ಟ ಜಿಲ್ಲೆಯ ಉಪನಿರ್ದೇಶಕರು |
| | | ಉಪ ನಿರ್ದೇಶಕರು (ಆಡಳಿತ) (ಕೇಂದ್ರಕಚೇರಿ) | (v) ರಿಂದ (viii) | ಪದವಿಪೂರ್ವ ಶಿಕ್ಷಣ ಇಲಾಖೆಯ ಆಯುಕ್ತರು/ ನಿರ್ದೇಶಕರು |

ಭಾರತದ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು
ಅವರ ಹೆಸರಿನಲ್ಲಿ,
**(ಪಿ. ಮಾರ್ಕಂಡೇಯ)**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ,
(ಸೇವಾ ನಿಯಮಗಳು – 2).

**ಕರ್ನಾಟಕ ಸರ್ಕಾರ**

ಸಂ. ಸಿಆಸುಇ 12 ಸೇಇವಿ 2007

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಧಾನಸೌಧ,
ಬೆಂಗಳೂರು, ದಿನಾಂಕ 29.01.2008

**ಅಧಿಸೂಚನೆ**

ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು, 1957ರ ನಿಯಮ 7ರ ಉಪನಿಯಮ (1)ರ ಪರಂತುಕದ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ ಮತ್ತು ಅಧಿಸೂಚನೆ ಸಂಖ್ಯೆ ಸಿಆಸುಇ 4 ಸೇಇವಿ 2005, ದಿನಾಂಕ 4.4.2005 ನ್ನು ರದ್ದುಗೊಳಿಸಿ, ಕರ್ನಾಟಕ ಸರ್ಕಾರವು ಕೆಳಗಿನ ಕೋಷ್ಟಕದ (2)ನೇ ಅಂಕಣದಲ್ಲಿ ನಮೂದಿಸಿದ ಇಲಾಖಾ ಮುಖ್ಯಸ್ಥರುಗಳನ್ನು ಅದರ (3)ನೇ ಅಂಕಣದಲ್ಲಿ ನಿರ್ದಿಷ್ಟಪಡಿಸಿದ ಕೇಡರುಗಳಿಗೆ ಸಂಬಂಧಿಸಿದಂತೆ ನೇಮಕ ಪ್ರಾಧಿಕಾರಿ ಎಂದು ಈ ಮೂಲಕ ನಿರ್ದಿಷ್ಟಪಡಿಸಿದೆ, ಎಂದರೆ:–

**ಕೋಷ್ಟಕ**

| ಕ್ರ.ಸಂ. | ಇಲಾಖಾ ಮುಖ್ಯಸ್ಥರು | ಕೇಡರುಗಳ ಹೆಸರು |
|---|---|---|
| 1. | ಸಾರ್ವಜನಿಕ ಶಿಕ್ಷಣ ಆಯುಕ್ತರು, ಬೆಂಗಳೂರು | (i) ಸರ್ಕಾರಿ ಬಾಲಕರ/ ಬಾಲಕಿಯರ ಪ್ರೌಢ ಶಾಲೆಗಳ ಮುಖ್ಯೋಪಾಧ್ಯಾಯರು/ ಮುಖ್ಯೋಪಾಧ್ಯಾಯಿನಿಯರು;<br>(ii) ಗೆಜೆಟೆಡ್ ಸಹಾಯಕರು;<br>(iii) ಮ್ಯಾನೇಜರ್‌ಗಳು, ಸಹಾಯಕ ನಿರ್ದೇಶಕರು (ಬೋಧಕೇತರ)<br>(iv) ಸಹಾಯಕ ನಿರ್ದೇಶಕರು (ಕಲೆಗಳು)<br>(v) ವಿಭಾಗೀಯ ಅಧೀಕ್ಷಕರು (ಸಂಗೀತ, ನೃತ್ಯ, ನಾಟಕ);<br>(vi) ಬೆಂಗಳೂರು ಮತ್ತು ಮೈಸೂರು ವಿಭಾಗದಲ್ಲಿರುವ ವಿಷಯ ಪರಿವೀಕ್ಷಕರು (ವೃತ್ತಿ ಶಿಕ್ಷಣ), ಜಿಲ್ಲಾ ದೈಹಿಕ ಶಿಕ್ಷಣ ಅಧೀಕ್ಷಕರು ಮತ್ತು ತತ್ಸಮಾನ ಕೇಡರುಗಳು. |

| | | |
|---|---|---|
| 2 | ಸಾರ್ವಜನಿಕ ಶಿಕ್ಷಣ ಹೆಚ್ಚುವರಿ ಆಯುಕ್ತರು, ಗುಲ್ಬರ್ಗ | ಗುಲ್ಬರ್ಗ ವಿಭಾಗದಲ್ಲಿನ ಸರ್ಕಾರಿ ಬಾಲಕರ/ ಬಾಲಕಿಯರ ಪ್ರೌಢ ಶಾಲೆಗಳ ಮುಖ್ಯೋಪಾಧ್ಯಾಯರು/ ಮುಖ್ಯೋಪಾಧ್ಯಾಯಿನಿಯರು ಮತ್ತು ಗೆಜೆಟೆಡ್ ಸಹಾಯಕರು ಮತ್ತು ಮ್ಯಾನೇಜರ್‌ಗಳು/ ಸಹಾಯಕ ನಿರ್ದೇಶಕರು (ಬೋಧಕೇತರ) |
| 3 | ಸಾರ್ವಜನಿಕ ಶಿಕ್ಷಣ ಹೆಚ್ಚುವರಿ ಆಯುಕ್ತರು, ಧಾರವಾಡ | ಧಾರವಾಡ ವಿಭಾಗದಲ್ಲಿನ ಸರ್ಕಾರಿ ಬಾಲಕರ/ ಬಾಲಕಿಯರ ಪ್ರೌಢಶಾಲೆಯ ಮುಖ್ಯೋಪಾಧ್ಯಾಯರು/ ಮುಖ್ಯೋಪಾಧ್ಯಾಯಿನಿಯರು, ಗೆಜೆಟೆಡ್ ಸಹಾಯಕರು ಮತ್ತು ಮ್ಯಾನೇಜರ್‌ಗಳು/ ಸಹಾಯಕ ನಿರ್ದೇಶಕರು (ಬೋಧಕೇತರ) |
| 4 | ಪದವಿ ಪೂರ್ವ ಶಿಕ್ಷಣ ಆಯುಕ್ತರು/ ನಿರ್ದೇಶಕರು, ಬೆಂಗಳೂರು | ಪದವಿಪೂರ್ವ ಶಿಕ್ಷಣ ಇಲಾಖೆಯಲ್ಲಿನ ಉಪನ್ಯಾಸಕರು. |

ಪರಂತು, ಈ ಅಧಿಸೂಚನೆಯ ದಿನಾಂಕಕ್ಕೆ ಮುಂಚೆ, ಮೇಲಿನ ಕೋಷ್ಟಕದ (3)ನೇ ಅಂಕಣದಲ್ಲಿ ನಿರ್ದಿಷ್ಟಪಡಿಸಿದ ಕೇಡರುಗಳಲ್ಲಿನ ಹುದ್ದೆಗಳಿಗೆ ನೇಮಕ ಮಾಡಿದ ವ್ಯಕ್ತಿಗಳಿಗೆ ಸಂಬಂಧಿಸಿದಂತೆ ಈ ಬಗ್ಗೆ ಅಧಿಕಾರಗಳ ಪ್ರತ್ಯಾಯೋಜನೆಗೆ ಒಳಪಟ್ಟು, ಯಾವುದೇ ದಂಡನೆಗಳನ್ನು ವಿಧಿಸುವ ಉದ್ದೇಶಕ್ಕಾಗಿ ಸರ್ಕಾರವು ಶಿಸ್ತು ಪ್ರಾಧಿಕಾರವಾಗಿ ಮುಂದುವರೆಯತಕ್ಕದ್ದು.

ಭಾರತದ ರಾಷ್ಟ್ರಪತಿಯವರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ,
**(ಪಿ. ಮಾರ್ಕಂಡೇಯ)**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ,
(ಸೇವಾ ನಿಯಮಗಳು–2).

**ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ**

**ಅಧಿಸೂಚನೆ**

ಸಂ. ಡಿಪಿಎಆರ್ 13 ಎಸ್‌ಡಿಇ 2007, ದಿನಾಂಕ 12ನೇ ಮೇ, 2008

ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು, 1957ನ್ನು ಮತ್ತಷ್ಟು ತಿದ್ದುಪಡಿ ಮಾಡಲು ಈ ಮುಂದಿನ ನಿಯಮಗಳ ಕರಡನ್ನು, ಅದರಿಂದ ಬಾಧಿತರಾಗುವ ಸಂಭವವಿರುವ ಎಲ್ಲಾ ವ್ಯಕ್ತಿಗಳಿಂದ, ಸರ್ಕಾರಿ ರಾಜ್ಯಪತ್ರದಲ್ಲಿ ಅದನ್ನು ಪ್ರಕಟಿಸಿದ ದಿನಾಂಕದಿಂದ 15 ದಿನಗಳೊಳಗಾಗಿ ಆಕ್ಷೇಪಣೆಗಳನ್ನು ಮತ್ತು ಸಲಹೆಗಳನ್ನು ಆಹ್ವಾನಿಸಿ, ಕರ್ನಾಟಕ ರಾಜ್ಯ ಸಿವಿಲ್ ಸೇವಾ ಅಧಿನಿಯಮ, 1978 (ಕರ್ನಾಟಕ ಅಧಿನಿಯಮ 1990ರ 14)ರ 3ನೇ ಪ್ರಕರಣದ (2)ನೇ ಉಪಪ್ರಕರಣದ (ಎ) ಖಂಡದ ಮೂಲಕ ಅಗತ್ಯಪಡಿಸಲಾದಂತೆ, ದಿನಾಂಕ 4ನೇ ಏಪ್ರಿಲ್ 2008ರ ಕರ್ನಾಟಕ ವಿಶೇಷ ರಾಜ್ಯಪತ್ರದ ಭಾಗ–IVಎ (ಸಂಖ್ಯೆ 354) ರಲ್ಲಿ ಅಧಿಸೂಚನೆ ಸಂಖ್ಯೆ ಡಿಪಿಎಆರ್ 13 ಎಸ್‌ಡಿಇ 2007, ದಿನಾಂಕ 1ನೇ ಏಪ್ರಿಲ್ 2008 ರಲ್ಲಿ ಪ್ರಕಟಿಸಿರುವುದರಿಂದ;

ಸದರಿ ರಾಜ್ಯಪತ್ರವನ್ನು 4.4.2008 ರಂದು ಸಾರ್ವಜನಿಕರಿಗೆ ಲಭ್ಯವಾಗುವಂತೆ ಮಾಡಿರುವುದರಿಂದ;

ಮತ್ತು ಸದರಿ ಕರಡು ನಿಯಮಗಳ ಬಗ್ಗೆ ರಾಜ್ಯ ಸರ್ಕಾರಕ್ಕೆ ಯಾವ ಆಕ್ಷೇಪಣೆಗಳೂ ಮತ್ತು ಸಲಹೆಗಳೂ ಬಾರದಿರುವುದರಿಂದ;

ಈಗ ಕರ್ನಾಟಕ ರಾಜ್ಯ ಸಿವಿಲ್ ಸೇವಾ ಅಧಿನಿಯಮ, 1978 (ಕರ್ನಾಟಕ ಅಧಿನಿಯಮ ಸಂಖ್ಯೆ 1990ರ 14)ರ 8ನೇ ಪ್ರಕರಣದೊಂದಿಗೆ ಓದಿಕೊಂಡ 3ನೇ ಪ್ರಕರಣದ (1)ನೇ ಉಪಪ್ರಕರಣದಿಂದ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಈ ಮೂಲಕ ಈ ಮುಂದಿನ ನಿಯಮಗಳನ್ನು ರಚಿಸುತ್ತದೆ, ಎಂದರೆ:–

**ನಿಯಮಗಳು**

**1. ಹೆಸರು ಮತ್ತು ಪ್ರಾರಂಭ.**– (1) ಈ ನಿಯಮಗಳನ್ನು ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) (27ನೇ ತಿದ್ದುಪಡಿ) ನಿಯಮಗಳು, 2007 ಎಂದು ಕರೆಯತಕ್ಕದ್ದು.

(2) ಅವು, ಸರ್ಕಾರಿ ರಾಜ್ಯಪತ್ರದಲ್ಲಿ ಅವುಗಳನ್ನು ಪ್ರಕಟಿಸಿದ ದಿನಾಂಕದಿಂದ ಜಾರಿಗೆ ಬರತಕ್ಕದ್ದು.

**2. 3ನೇ ನಿಯಮದ ತಿದ್ದುಪಡಿ.**– ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು, 1957ರ (ಇಲ್ಲಿ ಇನ್ನು ಮುಂದೆ ಸದರಿ ನಿಯಮಗಳೆಂದು ಉಲ್ಲೇಖಿಸಲಾಗಿದೆ) 3ನೇ ನಿಯಮದಲ್ಲಿ (1)ನೇ ಉಪನಿಯಮದಲ್ಲಿ (ಎ) ಖಂಡಕ್ಕೆ ಬದಲಾಗಿ ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

"(ಎ) ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು ಮತ್ತು ಇತರ ವಿಭಾಗೀಯ, ಜಿಲ್ಲಾ ಮುದ್ರಣಾಲಯಗಳು, ಲೇಖನ ಸಾಮಗ್ರಿ ಮಳಿಗೆಗಳು ಮತ್ತು ಪುಸ್ತಕ ಮಳಿಗೆಗಳು – ಇವುಗಳನ್ನು ಬಿಟ್ಟು ಔದ್ಯಮಿಕ ನಿಯೋಜನೆ (ಸ್ಥಾಯೀ ಆದೇಶಗಳ) ಅಧಿನಿಯಮ, 1946ರ (ಕೇಂದ್ರ ಅಧಿನಿಯಮ 1946ರ xx) ಉಪಬಂಧಗಳು ಸರ್ಕಾರದ ಔದ್ಯಮಿಕ ಉದ್ಯಮಗಳಲ್ಲಿ ನಿಯೋಜಿತರಾಗಿರುವ ಯಾವ ವ್ಯಕ್ತಿಗಳಿಗೆ ಅನ್ವಯವಾಗುವುವೋ ಆ ವ್ಯಕ್ತಿಗಳನ್ನು."

**3. ಅನುಸೂಚಿ IIರ ತಿದ್ದುಪಡಿ.**– ಸದರಿ ನಿಯಮಗಳ ಅನುಸೂಚಿ II ರಲ್ಲಿ,–

(i) ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು, ಸರ್ಕಾರದ ಲೇಖನ ಸಾಮಗ್ರಿ ಮಳಿಗೆ, ಬೆಂಗಳೂರು ಮತ್ತು ಸರ್ಕಾರದ ಕೇಂದ್ರ ಪುಸ್ತಕ ಮಳಿಗೆ, ಬೆಂಗಳೂರು" ಶೀರ್ಷಿಕೆ ಮತ್ತು ಅವುಗಳ ಅಡಿಯಲ್ಲಿ ಇರುವ ನಮೂದುಗಳ ಬದಲಾಗಿ ಈ ಮುಂದಿನವುಗಳನ್ನು ಸೇರಿಸತಕ್ಕದ್ದು, ಎಂದರೆ:–

**ಮುದ್ರಣ, ಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳ ಇಲಾಖೆ, ಎಲ್ಲಾ ಸರ್ಕಾರಿ ಮುದ್ರಣಾಲಯ, ಲೇಖನ ಸಾಮಗ್ರಿ ಮಳಿಗೆಗಳು ಮತ್ತು ಪುಸ್ತಕ ಮಳಿಗೆಗಳೂ ಸೇರಿದಂತೆ.**

| | | | | |
|---|---|---|---|---|
| **ಲಿಪಿಕ ಸಿಬ್ಬಂದಿಗಳು** | | | | |
| ಅಧೀಕ್ಷಕರುಗಳು, ಲಿಪಿಕ ಸಿಬ್ಬಂದಿ, ಪ್ರಥಮ ದರ್ಜೆ ಸಹಾಯಕ (ಲಿಪಿಕ), ದ್ವಿತೀಯ ದರ್ಜೆ ಸಹಾಯಕ (ಲಿಪಿಕ), ಶೀಘ್ರಲಿಪಿಗಾರ, ಹಿರಿಯ ಬೆರಳಚ್ಚುಗಾರ, ಬೆರಳಚ್ಚುಗಾರ, ಟೈಪ್‌ರೈಟರ್ ಮೆಕ್ಯಾನಿಕ್, ಚೀಫ್ ಕಾಸ್ಟ್ ಅಕೌಂಟೆಂಟ್, ಕಾಸ್ಟ್ ಅಕೌಂಟೆಂಟ್, ಯಾವುದೇ ವಿಭಾಗೀಯ ಮತ್ತು ಜಿಲ್ಲಾ ಸರ್ಕಾರಿ ಮುದ್ರಣಾಲಯದ, ಲೇಖನ ಸಾಮಗ್ರಿ ಮಳಿಗೆಗಳ ಮತ್ತು ಪುಸ್ತಕ ಮಳಿಗೆಗಳ ವಾಹನ ಚಾಲಕರು | ನಿರ್ದೇಶಕರು | ಸಂಬಂಧಪಟ್ಟ ಸಹಾಯಕ ನಿರ್ದೇಶಕರು | (ii) ರಿಂದ (iiiಎ) | ಉಪನಿರ್ದೇಶಕರು |
| | | ಸಂಬಂಧಪಟ್ಟ ಉಪ ನಿರ್ದೇಶಕರು | (ii) ರಿಂದ (iiiಎ) | ಜಂಟಿನಿರ್ದೇಶಕರು |
| | | ಹಿರಿಯ ಉಪ ನಿರ್ದೇಶಕರು | (iii) ರಿಂದ (ivಎ) | ಜಂಟಿನಿರ್ದೇಶಕರು |
| | | ಜಂಟಿ ನಿರ್ದೇಶಕರು | (ii) ರಿಂದ (ivಎ) | ನಿರ್ದೇಶಕರು |
| | | ನಿರ್ದೇಶಕರು | (v) ರಿಂದ (viii) | ಸರ್ಕಾರ |
| **ಔದ್ಯಮಿಕ ಸಿಬ್ಬಂದಿ** | | | | |
| ಮೇಲ್ವಿಚಾರಕ, ಮೇಲ್ವಿಚಾರಕ (ಪಿಜಡ್‌ಎಸ್), ಮುಖ್ಯ ಪರೀಕ್ಷಕ, ಮೆಕ್ಯಾನಿಕಲ್ ಸೂಪರ್‌ವೈಸರ್, ಎಲೆಕ್ಟ್ರಿಕಲ್ ಸೂಪರ್‌ವೈಸರ್, ಮೆಕ್ಯಾನಿಕಲ್ ಫೋರ್‌ಮನ್, ಫೋರ್‌ಮನ್, ಫೋರ್‌ಮನ್ ರಿಸೋ/ ಲೈನೋ/ ಮೋನೋ ಆಪರೇಟರ್, ಉಪ ಮುಖ್ಯ ಪರೀಕ್ಷಕ, ಅಧೀಕ್ಷಕರು (ಔದ್ಯಮಿಕ), ಹೆಡ್ ಕಂಪ್ಯೂಟರ್, ಪ್ರೊಸೆಸ್ ಆಪರೇಟರ್, | ನಿರ್ದೇಶಕರು | ಸಂಬಂಧಪಟ್ಟ ಸಹಾಯಕ ನಿರ್ದೇಶಕರು | (ii) ರಿಂದ (iiiಎ) | ಉಪನಿರ್ದೇಶಕರು |

| | | | | |
|---|---|---|---|---|
| ಕಲಾವಿದ, ಹಿರಿಯ ಆಫ್‌ಸೆಟ್ ಮುದ್ರಕ, ಎಲೆಕ್ಟ್ರೀಷಿಯನ್, ಎನ್‌ಗ್ರೇವರ್ ಮತ್ತು ಮೌಂಟರ್, ತಾಂತ್ರಿಕ ಸಹಾಯಕ, ಮುಖ್ಯ ಸಮಯ ಪಾಲಕ, ಹಿರಿಯ ಕರಡಚ್ಚು ಪರೀಕ್ಷಕ, ಪ್ರಥಮ ದರ್ಜೆ ಸಹಾಯಕ (ಔದ್ಯಮಿಕ), ಮುಖ್ಯ ಬಡಗಿ, ಸಹಾಯಕ ಡಿಟಿಪಿ ಆಪರೇಟರ್, ದ್ವಿತೀಯ ದರ್ಜೆ ಸಹಾಯಕ (ಔದ್ಯಮಿಕ), ಕಿರಿಯ ಕರಡಚ್ಚು ಪರೀಕ್ಷಕ, ಸಮಯ ಪಾಲಕ, ಹಿರಿಯ ಕಂಪೋಸಿಟರ್, ಹಿರಿಯ ಮಷಿನ್ ಮೈಂಡರ್, ಹಿರಿಯ ಬೈಂಡರ್, ಕಂಪೋಸಿಟರ್, ಮಷಿನ್ ಮೈಂಡರ್, ಬೈಂಡರ್ ಮತ್ತು ಎಲ್ಲಾ ಸರ್ಕಾರಿ, ವಿಭಾಗೀಯ ಹಾಗೂ ಜಿಲ್ಲಾ ಮುದ್ರಣಾಲಯದ ಇತರ 'ಸಿ' ಸಮೂಹದ ಔದ್ಯಮಿಕ ಕೇಡರ್ | | ಸಂಬಂಧಪಟ್ಟ ಉಪ ನಿರ್ದೇಶಕರು<br>ಹಿರಿಯ ಉಪ ನಿರ್ದೇಶಕರು<br>ಜಂಟಿ ನಿರ್ದೇಶಕರು<br>ನಿರ್ದೇಶಕರು | (ii) ರಿಂದ (iiiಎ)<br>(iii) ರಿಂದ (ivಎ)<br>(ii) ರಿಂದ (ivಎ)<br>(v) ರಿಂದ (viii) | ಜಂಟಿನಿರ್ದೇಶಕರು<br>ಜಂಟಿನಿರ್ದೇಶಕರು<br>ನಿರ್ದೇಶಕರು<br>ಸರ್ಕಾರ |

3. **ಅನುಸೂಚಿ IIIರ ತಿದ್ದುಪಡಿ.–** ಸದರಿ ನಿಯಮಗಳ ಅನುಸೂಚಿ III ರಲ್ಲಿ "ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು, ಸರ್ಕಾರಿ ಲೇಖನ ಸಾಮಗ್ರಿ ಮಳಿಗೆ, ಬೆಂಗಳೂರು ಮತ್ತು ಸರ್ಕಾರಿ ಕೇಂದ್ರ ಪುಸ್ತಕ ಮಳಿಗೆ, ಬೆಂಗಳೂರು" ಶೀರ್ಷಿಕೆ ಮತ್ತು ಅವುಗಳ ಅಡಿಯಲ್ಲಿ ಇರುವ ನಮೂದುಗಳ ಬದಲಾಗಿ ಈ ಮುಂದಿನವುಗಳನ್ನು ಸೇರಿಸತಕ್ಕದ್ದು, ಎಂದರೆ:–

4. **ಮುದ್ರಣ, ಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳ ಇಲಾಖೆ, ಎಲ್ಲಾ ಸರ್ಕಾರಿ ಮುದ್ರಣಾಲಯಗಳು, ಲೇಖನ ಸಾಮಗ್ರಿ ಮಳಿಗೆಗಳು ಮತ್ತು ಪುಸ್ತಕ ಮಳಿಗೆಗಳೂ ಸೇರಿದಂತೆ:**

| | | | | |
|---|---|---|---|---|
| **ಸಮೂಹ 'ಡಿ' ಲಿಪಿಕ ಸಿಬ್ಬಂದಿ:**<br>ಅಟೆಂಡರ್/ ಸೀನಿಯರ್ ಪ್ಯಾಕರ್/ ಪ್ಯಾಕರುಗಳು/ ಜವಾನರು ಮತ್ತು ಇತರ 'ಡಿ' ಸಮೂಹದ ಲಿಪಿಕ ಸಿಬ್ಬಂದಿ ಕೇಡರ್ | ಸಂಬಂಧಪಟ್ಟ ಉಪ ನಿರ್ದೇಶಕರು ಶಾಖೆಗಳಲ್ಲಿ ಉಪನಿರ್ದೇಶಕರು ಇಲ್ಲದಿದ್ದರೆ ಉಪನಿರ್ದೇಶಕರು (ಆಡಳಿತ ಮತ್ತು ಲೆಕ್ಕಪತ್ರಗಳು), ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು | ಸಂಬಂಧಪಟ್ಟ ಸಹಾಯಕ ನಿರ್ದೇಶಕರು<br>ಉಪ ನಿರ್ದೇಶಕರು | (i) ರಿಂದ (ivಎ)<br>(v) ರಿಂದ (viii) | ಉಪನಿರ್ದೇಶಕರು<br>ಜಂಟಿನಿರ್ದೇಶಕರು |
| **ಸಮೂಹ 'ಡಿ' ಔದ್ಯಮಿಕ ಸಿಬ್ಬಂದಿ–**<br>ಎಲ್ಲಾ 'ಡಿ' ಸಮೂಹದ ಔದ್ಯಮಿಕ ಸಿಬ್ಬಂದಿ | ಸಂಬಂಧಪಟ್ಟ ಉಪನಿರ್ದೇಶಕರು, ಶಾಖೆಗಳಲ್ಲಿ ಉಪನಿರ್ದೇಶಕರು ಇಲ್ಲದಿದ್ದರೆ ಉಪನಿರ್ದೇಶಕರು (ಆಡಳಿತ ಮತ್ತು ಲೆಕ್ಕ ಪತ್ರಗಳು), ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು. | ಸಂಬಂಧಪಟ್ಟ ಸಹಾಯಕ ನಿರ್ದೇಶಕರು<br>ಉಪ ನಿರ್ದೇಶಕರು | (i) ರಿಂದ (ivಎ)<br>(v) ರಿಂದ (viii) | ಉಪನಿರ್ದೇಶಕರು<br>ಜಂಟಿನಿರ್ದೇಶಕರು |

ಭಾರತದ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು
ಅವರ ಹೆಸರಿನಲ್ಲಿ,

**(ಪಿ. ಮಾರ್ಕಂಡೇಯ)**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ,
(ಸೇವಾ ನಿಯಮಗಳು – 2).

**ಕರ್ನಾಟಕ ಸರ್ಕಾರ**

ಸಂಖ್ಯೆ. ಡಿಪಿಎಆರ್ 21 ಎಸ್‌ಡಿಇ 2007

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಧಾನಸೌಧ,
ಬೆಂಗಳೂರು, ದಿನಾಂಕ 21.05.2008

**ಅಧಿಸೂಚನೆ**

ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು, 1957ನ್ನು ಮತ್ತಷ್ಟು ತಿದ್ದುಪಡಿ ಮಾಡಲು ಈ ಮುಂದಿನ ನಿಯಮಗಳ ಕರಡನ್ನು, ಅದರಿಂದ ಬಾಧಿತರಾಗುವ ಸಂಭವವಿರುವ ಎಲ್ಲಾ ವ್ಯಕ್ತಿಗಳಿಂದ, ಸರ್ಕಾರಿ ರಾಜ್ಯಪತ್ರದಲ್ಲಿ ಅದನ್ನು ಪ್ರಕಟಿಸಿದ ದಿನಾಂಕದಿಂದ 15 ದಿನಗಳೊಳಗಾಗಿ ಆಕ್ಷೇಪಣೆಗಳನ್ನು ಮತ್ತು ಸಲಹೆಗಳನ್ನು ಆಹ್ವಾನಿಸಿ, ಕರ್ನಾಟಕ ರಾಜ್ಯ ಸಿವಿಲ್ ಸೇವಾ ಅಧಿನಿಯಮ, 1978 (ಕರ್ನಾಟಕ ಅಧಿನಿಯಮ 1990ರ 14)ರ 3ನೇ ಪ್ರಕರಣದ (2)ನೇ ಉಪಪ್ರಕರಣದ (ಎ) ಖಂಡದ ಮೂಲಕ ಅಗತ್ಯಪಡಿಸಲಾದಂತೆ, ದಿನಾಂಕ 22ನೇ ಏಪ್ರಿಲ್ 2008ರ ಕರ್ನಾಟಕ ವಿಶೇಷ ರಾಜ್ಯಪತ್ರದ ಭಾಗ–IVಎ (ಸಂಖ್ಯೆ 403) ರಲ್ಲಿ ಅಧಿಸೂಚನೆ ಸಂಖ್ಯೆ ಡಿಪಿಎಆರ್ 21 ಎಸ್‌ಡಿಇ 2007, ದಿನಾಂಕ 17ನೇ ಏಪ್ರಿಲ್ 2008 ರಲ್ಲಿ ಪ್ರಕಟಿಸಿರುವುದರಿಂದ;

ಸದರಿ ರಾಜ್ಯಪತ್ರವನ್ನು 22.4.2008 ರಂದು ಸಾರ್ವಜನಿಕರಿಗೆ ಲಭ್ಯವಾಗುವಂತೆ ಮಾಡಿರುವುದರಿಂದ;

ಮತ್ತು ಸದರಿ ಕರಡು ನಿಯಮಗಳ ಬಗ್ಗೆ ರಾಜ್ಯ ಸರ್ಕಾರಕ್ಕೆ ಯಾವ ಆಕ್ಷೇಪಣೆಗಳೂ ಮತ್ತು ಸಲಹೆಗಳೂ ಬಾರದಿರುವುದರಿಂದ;

ಈಗ, ಕರ್ನಾಟಕ ಸಿವಿಲ್ ಸೇವಾ ಅಧಿನಿಯಮ, 1978 (ಕರ್ನಾಟಕ ಅಧಿನಿಯಮ 1990ರ 14)ರ 8ನೇ ಪ್ರಕರಣದೊಂದಿಗೆ ಓದಿಕೊಂಡ 3ನೇ ಪ್ರಕರಣದ (1)ನೇ ಉಪಪ್ರಕರಣದಿಂದ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು, ಈ ಮೂಲಕ ಈ ಮುಂದಿನ ನಿಯಮಗಳನ್ನು ರಚಿಸುತ್ತದೆ. ಎಂದರೆ:–

**ನಿಯಮಗಳು**

**1. ಹೆಸರು ಮತ್ತು ಪ್ರಾರಂಭ.–** ಈ ನಿಯಮಗಳನ್ನು ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) (28ನೇ ತಿದ್ದುಪಡಿ) ನಿಯಮಗಳು, 2008 ಎಂದು ಕರೆಯತಕ್ಕದ್ದು.

(2) ಅವು, ಸರ್ಕಾರಿ ರಾಜ್ಯಪತ್ರದಲ್ಲಿ ಅವುಗಳನ್ನು ಪ್ರಕಟಿಸಿದ ದಿನಾಂಕದಿಂದ ಜಾರಿಗೆ ಬರತಕ್ಕದ್ದು.

**2. ಅನುಸೂಚಿ IIರ ತಿದ್ದುಪಡಿ.–** ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು, 1957ರ ಅನುಸೂಚಿ II ರಲ್ಲಿ "ಸಾರ್ವಜನಿಕ ಶಿಕ್ಷಣ ಇಲಾಖೆ" ಶೀರ್ಷಿಕೆಯ ಅಡಿಯಲ್ಲಿ ಇರುವ "ಬೋಧಕ ಕೇಡರಿನ ಹುದ್ದೆಗಳು" ಎಂಬ ಉಪಶೀರ್ಷಿಕೆಯ ಅಡಿಯಲ್ಲಿ ಇರುವ ಮಾದರಿ ಹಿರಿಯ ಪ್ರಾಥಮಿಕ ಶಾಲೆಗಳಲ್ಲಿರುವ ಪದವೀಧರರಲ್ಲದ ಮುಖ್ಯೋಪಾಧ್ಯಾಯರು, ಹಿರಿಯ ಪ್ರಾಥಮಿಕ ಶಾಲೆಗಳಲ್ಲಿರುವ ಮುಖ್ಯೋಪಾಧ್ಯಾಯರು, ಪ್ರಾಥಮಿಕ ಶಾಲೆಯಲ್ಲಿರುವ ಪ್ರಾಥಮಿಕ ಸಹಾಯಕ ಶಿಕ್ಷಕರು, ಪ್ರಾಥಮಿಕ ಶಾಲೆಯಲ್ಲಿನ ಸಂಗೀತ ಶಿಕ್ಷಕರು, ಪ್ರಾಥಮಿಕ ಶಾಲೆಯಲ್ಲಿನ ಡ್ರಾಯಿಂಗ್ ಶಿಕ್ಷಕರು, ಪ್ರಾಥಮಿಕ ಶಾಲೆಯಲ್ಲಿನ ದೈಹಿಕ ಶಿಕ್ಷಣ ಶಿಕ್ಷಕರು, ಶಿಕ್ಷಣ ಸಂಯೋಜಕರು (ಪ್ರಾಥಮಿಕ) ಎಂಬ ಹುದ್ದೆಯ ಪ್ರವರ್ಗಕ್ಕೆ ಸಂಬಂಧಿಸಿದಂತೆ ಇರುವ ನಮೂದುಗಳಿಗೆ ಬದಲಾಗಿ ಈ ಮುಂದಿನವುಗಳನ್ನು ಸೇರಿಸತಕ್ಕದ್ದು, ಎಂದರೆ:–

| 1 | 2 | 3 | 4 | 5 |
|---|---|---|---|---|
| ಮಾದರಿ ಹಿರಿಯ ಪ್ರಾಥಮಿಕ ಶಾಲೆಗಳಲ್ಲಿನ ಪದವೀಧರರಲ್ಲದ ಮುಖ್ಯೋಪಾಧ್ಯಾಯರು, ಶಿಕ್ಷಣ ಸಂಯೋಜಕರು (ಪ್ರಾಥಮಿಕ) | ಸಾರ್ವಜನಿಕ ಶಿಕ್ಷಣ ಉಪ ನಿರ್ದೇಶಕರು | ಪ್ರೌಢ ಶಾಲಾ ಮುಖ್ಯೋಪಾಧ್ಯಾಯರು/ ಪದವಿ ಪೂರ್ವ ಕಾಲೇಜಿನ ಉಪ ಪ್ರಾಂಶುಪಾಲರು/ ಮತ್ತು ಪದನಿಮಿತ್ತ ಸಹಾಯಕ ಶಿಕ್ಷಣಾಧಿಕಾರಿ | (ii) ರಿಂದ (ivಎ) | ಕ್ಷೇತ್ರ ಶಿಕ್ಷಣಾಧಿಕಾರಿ |
| | | ಕ್ಷೇತ್ರ ಶಿಕ್ಷಣಾಧಿಕಾರಿ | (ii) ರಿಂದ (ivಎ) | ಸಾರ್ವಜನಿಕ ಶಿಕ್ಷಣ ಉಪನಿರ್ದೇಶಕರು |
| | | ಸಾರ್ವಜನಿಕ ಶಿಕ್ಷಣ ಉಪ ನಿರ್ದೇಶಕರು | (v) ರಿಂದ (viii) | ಸಾರ್ವಜನಿಕ ಶಿಕ್ಷಣ ಜಂಟಿ ನಿರ್ದೇಶಕರು |

| | | | | |
|---|---|---|---|---|
| ಹಿರಿಯ ಪ್ರಾಥಮಿಕ ಶಾಲೆಗಳಲ್ಲಿನ ಮುಖ್ಯೋಪಾಧ್ಯಾಯರು, ಪ್ರಾಥಮಿಕ ಶಾಲೆಗಳಲ್ಲಿನ ಸಹಾಯಕ ಶಿಕ್ಷಕರು, ಪ್ರಾಥಮಿಕ ಶಾಲೆಗಳಲ್ಲಿನ ಸಂಗೀತ ಶಿಕ್ಷಕರು, ಪ್ರಾಥಮಿಕ ಶಾಲೆಗಳಲ್ಲಿನ ಡ್ರಾಯಿಂಗ್ ಶಿಕ್ಷಕರು, ಪ್ರಾಥಮಿಕ ಶಾಲೆಗಳಲ್ಲಿನ ದೈಹಿಕ ಶಿಕ್ಷಣ ಶಿಕ್ಷಕರು, ನರ್ಸರಿ ಶಾಲಾ ಶಿಕ್ಷಕರು | ಕ್ಷೇತ್ರ ಶಿಕ್ಷಣಾಧಿಕಾರಿ | ಪ್ರೌಢ ಶಾಲಾ ಮುಖ್ಯೋಪಾಧ್ಯಾಯರು/ ಪದವಿಪೂರ್ವ ಕಾಲೇಜಿನ ಉಪಪ್ರಾಂಶುಪಾಲರು ಮತ್ತು ಪದನಿಮಿತ್ತ ಸಹಾಯಕ ಶಿಕ್ಷಣಾಧಿಕಾರಿ | (ii) ರಿಂದ (ivಎ) | ಕ್ಷೇತ್ರ ಶಿಕ್ಷಣಾಧಿಕಾರಿ |
| | | ಕ್ಷೇತ್ರ ಶಿಕ್ಷಣಾಧಿಕಾರಿ | (v) ರಿಂದ (viii) | ಸಾರ್ವಜನಿಕ ಶಿಕ್ಷಣ ಉಪ ನಿರ್ದೇಶಕರು |

ಭಾರತದ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು
ಅವರ ಹೆಸರಿನಲ್ಲಿ,
**(ಪಿ. ಮಾರ್ಕಂಡೇಯ)**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ,
(ಸೇವಾ ನಿಯಮಗಳು–2).

**ಕರ್ನಾಟಕ ಸರ್ಕಾರ**

ಸಂ. ಸಿಆಸುಇ 4 ಎಸ್‌ಡಿಇ 2008

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಧಾನಸೌಧ,
ಬೆಂಗಳೂರು, ದಿನಾಂಕ 18.07.2008

**ಅಧಿಸೂಚನೆ**

ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು, 1957ರ 10ನೇ ನಿಯಮದ (1)ನೇ ಉಪನಿಯಮದ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು, ಜಿಲ್ಲಾಮಟ್ಟದಲ್ಲಿರುವ ಉಪ ಆಯುಕ್ತರು (ಅಬಕಾರಿ) ಅವರಿಗೆ, ವಿಭಾಗೀಯ ಮಟ್ಟದಲ್ಲಿ ಇರುವ ಜಂಟಿ ಆಯುಕ್ತರು (ಜಾರಿ) ಅವರಿಗೆ ಮತ್ತು ರಾಜ್ಯಮಟ್ಟದಲ್ಲಿ ಇರುವ ಜಂಟಿ ಆಯುಕ್ತರು (ಜಾರಿ ಮತ್ತು ಗುಪ್ತವಾರ್ತೆ) ಅವರಿಗೆ ತಮ್ಮ ಆಡಳಿತ ನಿಯಂತ್ರಣದಲ್ಲಿ ಬರುವ ಯಾವುದೇ 'ಸಿ' ಮತ್ತು 'ಡಿ' ಸಮೂಹದ ನೌಕರನನ್ನು ಅಮಾನತ್ತಿನಲ್ಲಿಡಲು ಈ ಮೂಲಕ ಅಧಿಕಾರ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**(ಪಿ. ಮಾರ್ಕಂಡೇಯ)**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ,
(ಸೇವಾ ನಿಯಮಗಳು–2).

**ಕರ್ನಾಟಕ ಸರ್ಕಾರ**

ಸಂಖ್ಯೆ. ಡಿಪಿಎಆರ್ 18 ಎಸ್‌ಡಿಇ 2008

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಧಾನಸೌಧ,
ಬೆಂಗಳೂರು, ದಿನಾಂಕ 4.8.2008

**ತಿದ್ದೋಲೆ**

ಅಧಿಸೂಚನೆ ಸಂಖ್ಯೆ. ಡಿಪಿಎಆರ್ 17 ಎಸ್‌ಡಿಇ 2007, ದಿನಾಂಕ 26.12.2007 ರಲ್ಲಿ, ಪ್ಯಾರಾ 3 ರಲ್ಲಿ, ಎಂದರೆ, '3. 9ನೇ ನಿಯಮದ ತಿದ್ದುಪಡಿ' ಇದರಲ್ಲಿ 4700–6400 ಮತ್ತು 2600–4575 ಎಂಬ ಅಂಕಿಗಳು ಬರುವ ಕಡೆಗಳಲ್ಲೆಲ್ಲಾ ಅವುಗಳನ್ನು ಅನುಕ್ರಮವಾಗಿ 12800–16720 ಮತ್ತು 8000–13400 ಎಂದು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**(ಪಿ. ಮಾರ್ಕಂಡೇಯ)**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ,
(ಸೇವಾ ನಿಯಮಗಳು – 2).

**ಕರ್ನಾಟಕ ಸರ್ಕಾರ**

ಸಂಖ್ಯೆ. ಡಿಪಿಎಆರ್ 25 ಎಸ್‌ಡಿಇ 2007

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಧಾನಸೌಧ,
ಬೆಂಗಳೂರು, ದಿನಾಂಕ 26.08.2008

ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು, 1957ನ್ನು ಮತ್ತಷ್ಟು ತಿದ್ದುಪಡಿ ಮಾಡಲು ಈ ಮುಂದಿನ ನಿಯಮಗಳ ಕರಡನ್ನು, ಅದರಿಂದ ಬಾಧಿತರಾಗುವ ಸಂಭವವಿರುವ ಎಲ್ಲಾ ವ್ಯಕ್ತಿಗಳಿಂದ, ಸರ್ಕಾರಿ ರಾಜ್ಯಪತ್ರದಲ್ಲಿ ಅದನ್ನು ಪ್ರಕಟಿಸಿದ ದಿನಾಂಕದಿಂದ 30ದಿನಗಳೊಳಗಾಗಿ ಆಕ್ಷೇಪಣೆಗಳನ್ನು ಮತ್ತು ಸಲಹೆಗಳನ್ನು ಆಹ್ವಾನಿಸಿ, ಕರ್ನಾಟಕ ರಾಜ್ಯ ಸಿವಿಲ್ ಸೇವಾ ಅಧಿನಿಯಮ, 1978 (ಕರ್ನಾಟಕ ಅಧಿನಿಯಮ 1990ರ 14)ರ 3ನೇ ಪ್ರಕರಣದ (2)ನೇ ಉಪಪ್ರಕರಣದ (ಎ) ಖಂಡದ ಮೂಲಕ ಅಗತ್ಯಪಡಿಸಲಾದಂತೆ, ದಿನಾಂಕ 22ನೇ ಏಪ್ರಿಲ್ 2008ರ ಕರ್ನಾಟಕ ವಿಶೇಷ ರಾಜ್ಯಪತ್ರದ ಭಾಗ–IVಎ (ಸಂಖ್ಯೆ 405) ರಲ್ಲಿ ಅಧಿಸೂಚನೆ ಸಂಖ್ಯೆ ಡಿಪಿಎಆರ್ 25 ಎಸ್‌ಡಿಇ 2007, ದಿನಾಂಕ 21ನೇ ಏಪ್ರಿಲ್ 2008 ರಲ್ಲಿ ಪ್ರಕಟಿಸಿರುವುದರಿಂದ;

ಸದರಿ ರಾಜ್ಯಪತ್ರವನ್ನು 22.4.2008 ರಂದು ಸಾರ್ವಜನಿಕರಿಗೆ ಲಭ್ಯವಾಗುವಂತೆ ಮಾಡಿರುವುದರಿಂದ;

ಮತ್ತು ಈ ಕರಡು ನಿಯಮಗಳ ಬಗ್ಗೆ ಸ್ವೀಕರಿಸಿದ ಯಾವುದೇ ಆಕ್ಷೇಪಣೆಗಳನ್ನು ಮತ್ತು ಸಲಹೆಗಳನ್ನು ರಾಜ್ಯ ಸರ್ಕಾರವು ಪರಿಗಣಿಸಿರುವುದರಿಂದ;

ಈಗ ಕರ್ನಾಟಕ ರಾಜ್ಯ ಸಿವಿಲ್ ಸೇವಾ ಅಧಿನಿಯಮ, 1978 (ಕರ್ನಾಟಕ ಅಧಿನಿಯಮ ಸಂಖ್ಯೆ 1990ರ 14)ರ 8ನೇ ಪ್ರಕರಣದೊಂದಿಗೆ ಓದಿಕೊಂಡ 3ನೇ ಪ್ರಕರಣದ (1)ನೇ ಉಪಪ್ರಕರಣದಿಂದ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಈ ಮೂಲಕ ಈ ಮುಂದಿನ ನಿಯಮಗಳನ್ನು ರಚಿಸುತ್ತದೆ, ಎಂದರೆ:–

**1. ಹೆಸರು ಮತ್ತು ಪ್ರಾರಂಭ.**– (1) ಈ ನಿಯಮಗಳನ್ನು ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) (ತಿದ್ದುಪಡಿ) ನಿಯಮಗಳು, 2008 ಎಂದು ಕರೆಯತಕ್ಕದ್ದು.

(2) ಅವು ಸರ್ಕಾರಿ ರಾಜ್ಯಪತ್ರದಲ್ಲಿ ಅವುಗಳನ್ನು ಪ್ರಕಟಿಸಿದ ದಿನಾಂಕದಿಂದ ಜಾರಿಗೆ ಬರತಕ್ಕದ್ದು.

**2. 10ನೇ ನಿಯಮದ ತಿದ್ದುಪಡಿ.**– ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು, 1957ರ 10ನೇ ನಿಯಮದಲ್ಲಿ, (1)ನೇ ಉಪನಿಯಮದಲ್ಲಿ, (ಎ) ಖಂಡದ ತರುವಾಯ ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

"(ಎಎ) ಭ್ರಷ್ಟಾಚಾರ ಪ್ರತಿಬಂಧ ಅಧಿನಿಯಮ, 1988ರ ಅಡಿಯಲ್ಲಿ ಅಥವಾ ಇತರ ಯಾವುದೇ ಕಾನೂನಿನಡಿಯಲ್ಲಿ ಅಪರಾಧಗಳ ತನಿಖೆ ನಡೆಸಲು ಅಧಿಕಾರ ಹೊಂದಿದ ವ್ಯಕ್ತಿಗಳಿಗೆ, ಅವನು ತನ್ನ ಸರ್ಕಾರಿ ಕರ್ತವ್ಯ ನಿರ್ವಹಿಸುವಾಗ ಯಾವುದೇ ಕಾಲದಲ್ಲಿ ಅವನ ಬಲ್ಲ ಆದಾಯ ಮೂಲಗಳಿಗಿಂತ ಹೆಚ್ಚಿನ ಆರ್ಥಿಕ ಸಂಪನ್ಮೂಲಗಳನ್ನು ಅಥವಾ ಆಸ್ತಿಯನ್ನು ಅವನು ಹೊಂದಿದ್ದಾನೆಂದು ಅಥವಾ ಹೊಂದಿದ್ದನೆಂದು ತೋರಿಸುವ ಮೇಲ್ನೋಟದ ಸಾಕ್ಷ್ಯವಿರುವಲ್ಲಿ."

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**(ಪಿ. ಮಾರ್ಕಂಡೇಯ)**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ.
(ಸೇವಾ ನಿಯಮಗಳು – 2).

**ಕರ್ನಾಟಕ ಸರ್ಕಾರ**

ಸಂಖ್ಯೆ. ಡಿಪಿಎಆರ್ 9 ಎಸ್‌ಡಿಇ 2009

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಧಾನಸೌಧ,
ಬೆಂಗಳೂರು, ದಿನಾಂಕ 21.03.2009

**ತಿದ್ದೋಲೆ**

ಅಧಿಸೂಚನೆ ಸಂಖ್ಯೆ. ಡಿಪಿಎಆರ್ 4 ಎಸ್‌ಡಿಇ 2008, ದಿನಾಂಕ 18.7.2008 ರಲ್ಲಿ, "ಜಿಲ್ಲಾಮಟ್ಟದಲ್ಲಿ ಉಪ ಆಯುಕ್ತರು (ಅಬಕಾರಿ), ವಿಭಾಗೀಯ ಮಟ್ಟದಲ್ಲಿ ಅಬಕಾರಿ ಜಂಟಿ ಆಯುಕ್ತರು (ಜಾರಿ) ಮತ್ತು ರಾಜ್ಯಮಟ್ಟದಲ್ಲಿ ಜಂಟಿ ಆಯುಕ್ತರು (ಜಾರಿ ಮತ್ತು ಗುಪ್ತವಾರ್ತೆ)" ಎಂಬ ಪದಗಳನ್ನು "ಜಿಲ್ಲಾಮಟ್ಟದಲ್ಲಿ ಅಬಕಾರಿ ಉಪ ಆಯುಕ್ತರು, ವಿಭಾಗೀಯ ಮಟ್ಟದಲ್ಲಿ ಅಬಕಾರಿ ಜಂಟಿ ಆಯುಕ್ತರು (ಜಾರಿ ಮತ್ತು ಗುಪ್ತವಾರ್ತೆ) ಮತ್ತು ರಾಜ್ಯಮಟ್ಟದಲ್ಲಿ ಅಬಕಾರಿ ಜಂಟಿ ಆಯುಕ್ತರು (ರಾಜ್ಯ ಅಬಕಾರಿ ಗುಪ್ತವಾರ್ತೆ ವಿಭಾಗ)" ಎಂದು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**(ಪಿ. ಮಾರ್ಕಂಡೇಯ)**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ,
(ಸೇವಾ ನಿಯಮಗಳು – 2).

**ಕರ್ನಾಟಕ ಸರ್ಕಾರ**

**ಸಂಖ್ಯೆ: ಡಿಪಿಎಆರ್ 20 ಎಸ್‌ಡಿಇ 2009,** **ಕರ್ನಾಟಕ ಸರ್ಕಾರದ ಸಚಿವಾಲಯ**

**ವಿಧಾನಸೌಧ,**

**ಬೆಂಗಳೂರು, ದಿನಾಂಕ: 30ನೇ ಜುಲೈ, 2009**

**ಅಧಿಸೂಚನೆ**

ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು, 1957ರ 10ನೇ ನಿಯಮದ (1)ನೇ ಉಪನಿಯಮದಿಂದ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಜಿಲ್ಲಾಧಿಕಾರಿಗಳ ತಾಂತ್ರಿಕ ಸಹಾಯಕರುಗಳು ಹಾಗೂ ಪದನಿಮಿತ್ತ ಭೂ ದಾಖಲೆಗಳ ಉಪನಿರ್ದೇಶಕರುಗಳಿಗೆ ಅವರ ಆಡಳಿತ ವ್ಯಾಪ್ತಿಯಲ್ಲಿ ಕಾರ್ಯನಿರ್ವಹಿಸುವ ಯಾವುದೇ 'ಸಿ' ಮತ್ತು 'ಡಿ' ಸಮೂಹದ ನೌಕರರನ್ನು ಅಮಾನತ್ತಿನಲ್ಲಿಡಲು ಅಧಿಕಾರವನ್ನು ಈ ಮೂಲಕ ನೀಡುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**(ಪಿ. ಮಾರ್ಕಂಡೇಯ)**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ,

(ಸೇವಾ ನಿಯಮಗಳು – 2).

**ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಡಿಪಿಎಆರ್ 43 ಎಸ್‌ಡಿಇ 2008, ಬೆಂಗಳೂರು, ದಿನಾಂಕ: 27ನೇ ಆಗಸ್ಟ್, 2009**

ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು, 1957ನ್ನು ಮತ್ತಷ್ಟು ತಿದ್ದುಪಡಿ ಮಾಡಲು ಈ ಮುಂದಿನ ನಿಯಮಗಳ ಕರಡನ್ನು, ಅದರಿಂದ ಬಾಧಿತರಾಗುವ ಸಂಭವವಿರುವ ಎಲ್ಲಾ ವ್ಯಕ್ತಿಗಳಿಂದ, ಸರ್ಕಾರಿ ರಾಜ್ಯಪತ್ರದಲ್ಲಿ ಅದನ್ನು ಪ್ರಕಟಿಸಿದ ದಿನಾಂಕದಿಂದ 15 ದಿನಗಳೊಳಗಾಗಿ ಆಕ್ಷೇಪಣೆಗಳನ್ನು ಮತ್ತು ಸಲಹೆಗಳನ್ನು ಆಹ್ವಾನಿಸಿ, ಕರ್ನಾಟಕ ರಾಜ್ಯ ಸಿವಿಲ್ ಸೇವಾ ಅಧಿನಿಯಮ, 1978 (ಕರ್ನಾಟಕ ಅಧಿನಿಯಮ 1990ರ 14)ರ 3ನೇ ಪ್ರಕರಣದ (2)ನೇ ಉಪಪ್ರಕರಣದ (ಎ) ಖಂಡದ ಮೂಲಕ ಅಗತ್ಯಪಡಿಸಲಾದಂತೆ, ದಿನಾಂಕ 29ನೇ ಜೂನ್ 2009ರ ಕರ್ನಾಟಕ ವಿಶೇಷ ರಾಜ್ಯಪತ್ರದ ಭಾಗ–IVಎ (ಸಂಖ್ಯೆ. 486) ರಲ್ಲಿ ಅಧಿಸೂಚನೆ ಸಂಖ್ಯೆ ಡಿಪಿಎಆರ್ 43 ಎಸ್‌ಡಿಇ 2008, ದಿನಾಂಕ 25ನೇ ಜೂನ್ 2009 ರಲ್ಲಿ ಪ್ರಕಟಿಸಿರುವುದರಿಂದ;

ಮತ್ತು ಸದರಿ ರಾಜ್ಯಪತ್ರವನ್ನು ದಿನಾಂಕ 29.6.2009 ರಂದು ಸಾರ್ವಜನಿಕರಿಗೆ ಲಭ್ಯವಾಗುವಂತೆ ಮಾಡಿರುವುದರಿಂದ;

ಮತ್ತು, ಸದರಿ ಕರಡು ನಿಯಮಗಳ ಬಗ್ಗೆ ರಾಜ್ಯ ಸರ್ಕಾರಕ್ಕೆ ಯಾವ ಆಕ್ಷೇಪಣೆಗಳೂ/ ಸಲಹೆಗಳೂ ಬಾರದಿರುವುದರಿಂದ;

ಈಗ ಕರ್ನಾಟಕ ರಾಜ್ಯ ಸಿವಿಲ್ ಸೇವಾ ಅಧಿನಿಯಮ, 1978 (ಕರ್ನಾಟಕ ಅಧಿನಿಯಮ 1990ರ 14)ರ 8ನೇ ಪ್ರಕರಣದೊಂದಿಗೆ ಓದಿಕೊಂಡ 3ನೇ ಪ್ರಕರಣದ (1)ನೇ ಉಪಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಈ ಮೂಲಕ ಈ ಮುಂದಿನ ನಿಯಮಗಳನ್ನು ರಚಿಸುತ್ತದೆ, ಎಂದರೆ:–

**1. ಹೆಸರು ಮತ್ತು ಪ್ರಾರಂಭ.–** ಈ ನಿಯಮಗಳನ್ನು ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) (30ನೇ ತಿದ್ದುಪಡಿ) ನಿಯಮಗಳು, 2009 ಎಂದು ಕರೆಯತಕ್ಕದ್ದು.

(2) ಅವು ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ ಜಾರಿಗೆ ಬರತಕ್ಕದ್ದು.

**2. ಅನುಸೂಚಿ II ಕ್ಕೆ ತಿದ್ದುಪಡಿ.–** ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು, 1957 (ಇಲ್ಲಿ ಇನ್ನುಮುಂದೆ ಸದರಿ ನಿಯಮಗಳು ಎಂದು ಉಲ್ಲೇಖಿಸಲಾಗಿದೆ)ರ ಅನುಸೂಚಿ II ರಲ್ಲಿ **"ಕರ್ನಾಟಕ ಸರ್ಕಾರ ಸಚಿವಾಲಯ"** ಎಂಬ ಶೀರ್ಷಿಕೆ ಅಡಿಯಲ್ಲಿನ ನಮೂದುಗಳ ಬದಲಾಗಿ ಈ ಮುಂದಿನವುಗಳನ್ನು ಸೇರಿಸತಕ್ಕದ್ದು, ಎಂದರೆ:–

| ಹುದ್ದೆಗಳ ವರ್ಗ | ನೇಮಕ ಮಾಡಲು ಅಧಿಕಾರವುಳ್ಳ ಪ್ರಾಧಿಕಾರಿ | ದಂಡನೆಗಳನ್ನು ವಿಧಿಸಲು ಅಧಿಕಾರವುಳ್ಳ ಪ್ರಾಧಿಕಾರಿ ಮತ್ತು ಅವರು ವಿಧಿಸಬಹುದಾದ ದಂಡನೆಗಳು | | ಅಪೀಲು ಪ್ರಾಧಿಕಾರಿ |
|---|---|---|---|---|
| | | ಪ್ರಾಧಿಕಾರಿ | ದಂಡನೆಗಳು | |
| 1 | 2 | 3 | 4 | 5 |
| ಸಚಿವಾಲಯದ ಎಲ್ಲ ಇಲಾಖೆಗಳ ಹಿರಿಯ ಸಹಾಯಕರು, ಸಹಾಯಕರು, ಶೀಘ್ರಲಿಪಿಗಾರರು, ಕಿರಿಯ ಸಹಾಯಕರು, ಬೆರಳಚ್ಚುಗಾರರು ಮತ್ತು ಎಲ್ಲ ಇತರ ಸಮೂಹ–ಸಿ ಹುದ್ದೆಗಳು (ಸಚಿವ ಸಂಪುಟ ವ್ಯವಹಾರಗಳ ಇಲಾಖೆ ಮತ್ತು ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆಯಲ್ಲಿರುವವರನ್ನು ಮತ್ತು ಸ್ಥಾನಿಕ ಆಯುಕ್ತರು, ಕರ್ನಾಟಕ ಭವನ, ನವದೆಹಲಿ ಇವರ ಕಚೇರಿಯಲ್ಲಿರುವವರನ್ನು ಹೊರತುಪಡಿಸಿ) | ಸರ್ಕಾರದ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ | ಸಂಬಂಧಪಟ್ಟ ಇಲಾಖೆಯ ಸರ್ಕಾರದ ಉಪ ಕಾರ್ಯದರ್ಶಿ/ಜಂಟಿ ಕಾರ್ಯದರ್ಶಿ/ಅಪರ ಕಾರ್ಯದರ್ಶಿ<br><br>**ಅಥವಾ** | (ii) ರಿಂದ (ivಎ)ವರೆಗೆ | ಸಂಬಂಧಪಟ್ಟ ಇಲಾಖೆಯ ಸರ್ಕಾರದ ಕಾರ್ಯದರ್ಶಿ |
| | | ಸರ್ಕಾರದ ಉಪ ಕಾರ್ಯದರ್ಶಿ/ಜಂಟಿ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ<br>ಸಂಬಂಧಪಟ್ಟ ಇಲಾಖೆಯ ಸರ್ಕಾರದ ಕಾರ್ಯದರ್ಶಿ | (ii) ರಿಂದ (ivಎ)ವರೆಗೆ<br>(v) ರಿಂದ (viii)ರವರೆಗೆ | ಸರ್ಕಾರದ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ<br>ಅಪರ ಮುಖ್ಯ ಕಾರ್ಯದರ್ಶಿ |
| ಹಿರಿಯ ಸಹಾಯಕರು, ಸಹಾಯಕರು, ಶೀಘ್ರಲಿಪಿಗಾರರು, ಕಿರಿಯ ಸಹಾಯಕರು, ಬೆರಳಚ್ಚುಗಾರರು, ಟೈಪರೈಟರ್ ಮೆಕ್ಯಾನಿಕ್, ಮೇಲ್ವಿಚಾರಕ (ಪಹರೆ ಮತ್ತು ಕಾವಲು), ಟೆಲಿಫೋನ್ ಆಪರೇಟರ್‌ಗಳು ಮತ್ತು ಸಚಿವ ಸಂಪುಟ ವ್ಯವಹಾರಗಳ ಇಲಾಖೆ ಹಾಗೂ ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆಯಲ್ಲಿರುವ ಎಲ್ಲ ಇತರ ಸಮೂಹ – ಸಿ ಹುದ್ದೆಗಳು | ಸರ್ಕಾರದ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ | ಸರ್ಕಾರದ ಉಪಕಾರ್ಯದರ್ಶಿ/ ಜಂಟಿಕಾರ್ಯದರ್ಶಿ/ ಅಪರಕಾರ್ಯದರ್ಶಿ, ಸಚಿವ ಸಂಪುಟ ವ್ಯವಹಾರಗಳ ಇಲಾಖೆ ಮತ್ತು ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ<br>ಸರ್ಕಾರದ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ | (ii) ರಿಂದ (ivಎ)ವರೆಗೆ<br>(v) ರಿಂದ (viii)ರವರೆಗೆ | ಸರ್ಕಾರದ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ<br>ಅಪರ ಮುಖ್ಯ ಕಾರ್ಯದರ್ಶಿ |
| ಹಿರಿಯ ಸಹಾಯಕರು, ಸಹಾಯಕರು, ಶೀಘ್ರಲಿಪಿಗಾರರು, ಗುಮಾಸ್ತ – ಹಾಗೂ–ಬೆರಳಚ್ಚುಗಾರರು, ಬೆರಳಚ್ಚುಗಾರರು ಮತ್ತು ಸ್ಥಾನಿಕ ಆಯುಕ್ತರು, ಕರ್ನಾಟಕ ಭವನ, ನವದೆಹಲಿ ಅವರ ಕಚೇರಿಯಲ್ಲಿರುವ ಇತರ ಎಲ್ಲ ಸಮೂಹ–ಸಿ ಹುದ್ದೆಗಳು | ಸ್ಥಾನಿಕ ಆಯುಕ್ತರು, ಕರ್ನಾಟಕ ಭವನ, ನವದೆಹಲಿ | ಉಪ ಸ್ಥಾನಿಕ ಆಯುಕ್ತರು, ಕರ್ನಾಟಕ ಭವನ, ನವದೆಹಲಿ<br>ಸ್ಥಾನಿಕ ಆಯುಕ್ತರು, ಕರ್ನಾಟಕ ಭವನ, ನವದೆಹಲಿ | (ii) ರಿಂದ (ivಎ)ವರೆಗೆ<br>(v) ರಿಂದ (viii)ರವರೆಗೆ | ಸ್ಥಾನಿಕ ಆಯುಕ್ತರು, ಕರ್ನಾಟಕ ಭವನ, ನವದೆಹಲಿ<br>ಅಪರ ಮುಖ್ಯ ಕಾರ್ಯದರ್ಶಿ |
| ಸಚಿವರ/ ರಾಜ್ಯ ಸಚಿವರ ಆಪ್ತ ಸಿಬ್ಬಂದಿ ವರ್ಗದಲ್ಲಿರುವ ಎಲ್ಲ ಸಮೂಹ–ಸಿ ಹುದ್ದೆಗಳು | ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ | ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ | (ii) ರಿಂದ (viii)ರವರೆಗೆ | ಅಪರ ಮುಖ್ಯ ಕಾರ್ಯದರ್ಶಿ |

ಪರಂತು, ಯಾವ ನೌಕರರಿಗೆ ಸಂಬಂಧಪಟ್ಟಂತೆ ಅಪರ ಮುಖ್ಯ ಕಾರ್ಯದರ್ಶಿಯವರು ಅಥವಾ ಮುಖ್ಯ ಕಾರ್ಯದರ್ಶಿಯವರು ನೇಮಕ ಪ್ರಾಧಿಕಾರಿಯಾಗಿರುವರೋ ಆ ನೌಕರರಿಗೆ ಸಂಬಂಧಪಟ್ಟಂತೆ ಸಂಬಂಧಪಟ್ಟ ಇಲಾಖೆಯ ಸರ್ಕಾರದ ಕಾರ್ಯದರ್ಶಿಯವರು 8ನೇ ನಿಯಮದ (v) ರಿಂದ (viii)ರ ವರೆಗಿನ ಖಂಡಗಳಲ್ಲಿ ನಿರ್ದಿಷ್ಟಪಡಿಸಿರುವ ಯಾವುದೇ ಕಠಿಣ ದಂಡನೆಗಳನ್ನು ವಿಧಿಸತಕ್ಕದ್ದಲ್ಲ.

**ವಿವರಣೆ**

1. "ಸರ್ಕಾರದ ಸಂಬಂಧಪಟ್ಟ ಉಪ ಕಾರ್ಯದರ್ಶಿ/ ಜಂಟಿ ಕಾರ್ಯದರ್ಶಿ/ ಅಪರ ಕಾರ್ಯದರ್ಶಿ" ಎಂದರೆ ಈ ನಿಯಮಗಳ ಮೇರೆಗೆ ಕ್ರಮಕೈಗೊಳ್ಳುವ ಕಾಲದಲ್ಲಿ ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆಯನ್ನು ಹೊರತುಪಡಿಸಿ ಆ ಅಧಿಕಾರಿಯು ಯಾವ ಇಲಾಖೆಯಲ್ಲಿ ಸೇವೆ ಸಲ್ಲಿಸುತ್ತಿರುವನೋ ಆ ಇಲಾಖೆಯ ಆಡಳಿತದ ಪ್ರಭಾರದಲ್ಲಿರುವ ಸರ್ಕಾರದ ಉಪ ಕಾರ್ಯದರ್ಶಿ/ ಜಂಟಿ ಕಾರ್ಯದರ್ಶಿ/ ಅಪರ ಕಾರ್ಯದರ್ಶಿ.
2. "ಸರ್ಕಾರದ ಉಪ ಕಾರ್ಯದರ್ಶಿ/ ಜಂಟಿ ಕಾರ್ಯದರ್ಶಿ/ ಅಪರ ಕಾರ್ಯದರ್ಶಿ, ಸಚಿವ ಸಂಪುಟ ವ್ಯವಹಾರಗಳ ಇಲಾಖೆ ಮತ್ತು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ" ಎಂದರೆ ಆ ಇಲಾಖೆಯ ಆಡಳಿತದ ಪ್ರಭಾರದಲ್ಲಿರುವ ಸರ್ಕಾರದ ಉಪ ಕಾರ್ಯದರ್ಶಿ/ ಜಂಟಿ ಕಾರ್ಯದರ್ಶಿ/ ಅಪರ ಕಾರ್ಯದರ್ಶಿ.

**3. ಅನುಸೂಚಿ IIIಕ್ಕೆ ತಿದ್ದುಪಡಿ.**– ಸದರಿ ನಿಯಮಗಳ ಅನುಸೂಚಿ III ರಲ್ಲಿ **"ಕರ್ನಾಟಕ ಸರ್ಕಾರದ ಸಚಿವಾಲಯ"** ಶೀರ್ಷಿಕೆ ಅಡಿಯಲ್ಲಿನ ನಮೂದುಗಳ ಬದಲಾಗಿ ಈ ಮುಂದಿನವುಗಳನ್ನು ಸೇರಿಸತಕ್ಕದ್ದು, ಎಂದರೆ:–

| 1 | 2 | 3 | 4 | 5 |
|---|---|---|---|---|
| ಸಚಿವಾಲಯದ ಎಲ್ಲ ಸಮೂಹ–ಡಿ ಹುದ್ದೆಗಳು (ಸಚಿವ ಸಂಪುಟ ವ್ಯವಹಾರಗಳ ಇಲಾಖೆ ಮತ್ತು ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆಯಲ್ಲಿರುವವರನ್ನು ಹಾಗೂ ಸ್ಥಾನಿಕ ಆಯುಕ್ತರು, ಕರ್ನಾಟಕ ಭವನ, ನವದೆಹಲಿ ಇವರ ಕಚೇರಿ ಯಲ್ಲಿರುವವರನ್ನು ಹೊರತುಪಡಿಸಿ) | ಉಪ ಕಾರ್ಯದರ್ಶಿ/ ಜಂಟಿಕಾರ್ಯದರ್ಶಿ/ ಅಪರ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಆಡಳಿತ) | ಸಂಬಂಧಪಟ್ಟ ಇಲಾಖೆಯ ಸರ್ಕಾರದ ಅಧೀನ ಕಾರ್ಯದರ್ಶಿ<br><br>ಸಂಬಂಧಪಟ್ಟ ಇಲಾಖೆಯ ಸರ್ಕಾರದ ಉಪಕಾರ್ಯದರ್ಶಿ/ ಜಂಟಿಕಾರ್ಯದರ್ಶಿ/ ಅಪರಕಾರ್ಯದರ್ಶಿ | (i) ರಿಂದ (ivಎ)ವರೆಗೆ<br><br>(v) ರಿಂದ (viii)ರ ವರೆಗೆ | ಸಂಬಂಧಪಟ್ಟ ಇಲಾಖೆಯ ಸರ್ಕಾರದ ಉಪಕಾರ್ಯದರ್ಶಿ<br><br>ಸಂಬಂಧಪಟ್ಟ ಇಲಾಖೆಯ ಸರ್ಕಾರದ ಕಾರ್ಯದರ್ಶಿ |
| ಸಚಿವ ಸಂಪುಟ ವ್ಯವಹಾರಗಳ ಇಲಾಖೆ ಮತ್ತು ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆಯ ಎಲ್ಲ ಸಮೂಹ–ಡಿ ಹುದ್ದೆಗಳು | ಸರ್ಕಾರದ ಉಪಕಾರ್ಯದರ್ಶಿ/ ಜಂಟಿಕಾರ್ಯದರ್ಶಿ/ ಅಪರಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ | ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆಯಲ್ಲಿನ ಸಂಬಂಧಪಟ್ಟ ಅಧೀನಕಾರ್ಯದರ್ಶಿ | (i) ರಿಂದ (ivಎ)ವರೆಗೆ | ಸರ್ಕಾರದ ಉಪಕಾರ್ಯದರ್ಶಿ/ ಜಂಟಿಕಾರ್ಯದರ್ಶಿ/ ಅಪರಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಆಡಳಿತ) |
| | | ಸರ್ಕಾರದ ಉಪಕಾರ್ಯದರ್ಶಿ/ ಜಂಟಿ ಕಾರ್ಯದರ್ಶಿ/ ಅಪರಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಆಡಳಿತ) | (v) ರಿಂದ (viii)ರ ವರೆಗೆ | ಸರ್ಕಾರದ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ |

| 1 | 2 | 3 | 4 | 5 |
|---|---|---|---|---|
| ಸ್ಥಾನಿಕ ಆಯುಕ್ತರು, ಕರ್ನಾಟಕ ಭವನ, ನವದೆಹಲಿ ಇವರ ಕಚೇರಿಯಲ್ಲಿನ ಡಿಸ್‌ಪ್ಯಾಚ್ ರೈಡರ್, ಜವಾನರು ಮತ್ತು ಇತರ ಎಲ್ಲ ಸಮೂಹ–ಡಿ ಹುದ್ದೆಗಳು | ಸ್ಥಾನಿಕ ಆಯುಕ್ತರು, ಕರ್ನಾಟಕ ಭವನ, ನವದೆಹಲಿ | ಉಪಸ್ಥಾನಿಕ ಆಯುಕ್ತರು, ಕರ್ನಾಟಕ ಭವನ, ನವದೆಹಲಿ<br>ಸ್ಥಾನಿಕ ಆಯುಕ್ತರು, ಕರ್ನಾಟಕ ಭವನ, ನವದೆಹಲಿ | (i) ರಿಂದ (ivಎ)ವರೆಗೆ<br>(v) ರಿಂದ (viii)ರ ವರೆಗೆ | ಸ್ಥಾನಿಕ ಆಯುಕ್ತರು, ಕರ್ನಾಟಕ ಭವನ<br>ಅಪರ ಮುಖ್ಯ ಕಾರ್ಯದರ್ಶಿ |
| ಮುಖ್ಯಮಂತ್ರಿಗಳ/ ಸಚಿವರ/ ರಾಜ್ಯ ಸಚಿವರ ಆಪ್ತ ಸಿಬ್ಬಂದಿ ವರ್ಗದ ಎಲ್ಲ ಸಮೂಹ–ಡಿ ಹುದ್ದೆಗಳು | ಉಪಕಾರ್ಯದರ್ಶಿ/ ಜಂಟಿಕಾರ್ಯದರ್ಶಿ/ ಅಪರಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಆಡಳಿತ) | ಮುಖ್ಯಮಂತ್ರಿಯವರ/ ಸಚಿವರ/ ರಾಜ್ಯ ಸಚಿವರ ಆಪ್ತ ಕಾರ್ಯದರ್ಶಿ<br>ಉಪಕಾರ್ಯದರ್ಶಿ/ ಜಂಟಿಕಾರ್ಯದರ್ಶಿ/ ಅಪರ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಆಡಳಿತ) | (i) ರಿಂದ (ivಎ)ವರೆಗೆ<br>(v) ರಿಂದ (viii)ರ ವರೆಗೆ | ಉಪಕಾರ್ಯದರ್ಶಿ/ ಜಂಟಿಕಾರ್ಯದರ್ಶಿ/ ಅಪರಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಆಡಳಿತ)<br>ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ |
| **ಮುಖ್ಯ ಚುನಾವಣಾಧಿಕಾರಿಯವರ ಕಚೇರಿ– ಕರ್ನಾಟಕ ಸರ್ಕಾರದ ಸಚಿವಾಲಯದಿಂದ ಪ್ರತಿನಿಯೋಜನೆಯ ಮೇಲಿರುವ ಸಿಬ್ಬಂದಿಗೆ ಸಂಬಂಧಪಟ್ಟಂತೆ** | | | | |
| 1 | 2 | 3 | 4 | 5 |
| ಎಲ್ಲ ಸಮೂಹ–ಡಿ ಹುದ್ದೆಗಳು | ಸರ್ಕಾರದ ಉಪಕಾರ್ಯದರ್ಶಿ/ ಜಂಟಿಕಾರ್ಯದರ್ಶಿ/ ಅಪರಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಆಡಳಿತ) | ಸರ್ಕಾರದ ಅಧೀನ ಕಾರ್ಯದರ್ಶಿ (ಚುನಾವಣೆಗಳು)<br>ಉಪಕಾರ್ಯದರ್ಶಿ/ ಜಂಟಿಕಾರ್ಯದರ್ಶಿ/ ಅಪರ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಆಡಳಿತ) | (i) ರಿಂದ (ivಎ)ವರೆಗೆ<br>(v) ರಿಂದ (viii)ವರೆಗೆ | ಸರ್ಕಾರದ ಉಪಕಾರ್ಯದರ್ಶಿ/ ಜಂಟಿಕಾರ್ಯದರ್ಶಿ/ ಅಪರಕಾರ್ಯದರ್ಶಿ, (ಚುನಾವಣೆಗಳು)<br>ಸರ್ಕಾರದ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ |

ಪರಂತು, ಸರ್ಕಾರದ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ ಇವರಿಂದ ಅಥವಾ ಇವರ ದರ್ಜೆಯ ಮತ್ತು ಇವರ ದರ್ಜೆಗಿಂತ ಮೇಲ್ಪಟ್ಟ ದರ್ಜೆಯ ಅಧಿಕಾರಿಯಿಂದ ನೇಮಕಗೊಂಡಿರುವಂತಹ ನೌಕರರಿಗೆ ಸಂಬಂಧಪಟ್ಟಂತೆ 8ನೇ ನಿಯಮದ (v) ರಿಂದ (viii)ರ ವರೆಗಿನ ಖಂಡಗಳಲ್ಲಿ ನಿರ್ದಿಷ್ಟಪಡಿಸಿರುವ ಯಾವುದೇ ಕಠಿಣ ದಂಡನೆಯನ್ನು ಸಂಬಂಧಪಟ್ಟ ಇಲಾಖೆಯ ಉಪ ಕಾರ್ಯದರ್ಶಿ/ ಜಂಟಿ ಕಾರ್ಯದರ್ಶಿ/ ಅಪರ ಕಾರ್ಯದರ್ಶಿಯವರು ವಿಧಿಸತಕ್ಕದ್ದಲ್ಲ.

**ವಿವರಣೆ:**

(i) "ಅಧೀನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ" ಎಂದರೆ ಕರ್ನಾಟಕ ಸರ್ಕಾರ ಸಚಿವಾಲಯದ ಸಮೂಹ–ಡಿ ಸಿಬ್ಬಂದಿಯ ಸೇವಾ ಷರತ್ತುಗಳಿಗೆ ಸಂಬಂಧಿಸಿದ ವಿಷಯಗಳ ಪ್ರಭಾರದಲ್ಲಿರುವ, ಸಚಿವ ಸಂಪುಟ ವ್ಯವಹಾರಗಳ ಇಲಾಖೆ ಮತ್ತು ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆಯಲ್ಲಿನ ಸರ್ಕಾರದ ಅಧೀನ ಕಾರ್ಯದರ್ಶಿ.

(ii) "ಸಂಬಂಧಪಟ್ಟ ಅಧೀನ ಕಾರ್ಯದರ್ಶಿ" ಎಂದರೆ "ಈ ನಿಯಮಗಳ ಮೇರೆಗೆ ಕ್ರಮ ಕೈಗೊಳ್ಳುವ ಕಾಲದಲ್ಲಿ ಸಂಬಂಧಪಟ್ಟ ಸಮೂಹ–ಡಿ ನೌಕರನು, ಸಚಿವ ಸಂಪುಟ ವ್ಯವಹಾರಗಳ ಇಲಾಖೆ ಮತ್ತು ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆಯನ್ನು ಹೊರತುಪಡಿಸಿ, ಸಚಿವಾಲಯದ ಯಾವುದೇ ಇಲಾಖೆಯಲ್ಲಿ ಸರ್ಕಾರದ ಯಾವ ಅಧೀನ ಕಾರ್ಯದರ್ಶಿಯವರಿಗೆ ಅಧೀನನಾಗಿರುವನೋ ಆ ಯಾವುದೇ ಇಲಾಖೆಯಲ್ಲಿನ ಸರ್ಕಾರದ ಅಧೀನ ಕಾರ್ಯದರ್ಶಿ ಮತ್ತು ಸರ್ಕಾರದ ಕಾರ್ಯದರ್ಶಿ/ ಅಪರ ಕಾರ್ಯದರ್ಶಿ/ ಜಂಟಿ ಕಾರ್ಯದರ್ಶಿ/ ಉಪ ಕಾರ್ಯದರ್ಶಿಯವರ ಆಪ್ತ ಸಿಬ್ಬಂದಿ ವರ್ಗದ ಸಮೂಹ–ಡಿ ನೌಕರನ ಸಂದರ್ಭದಲ್ಲಿ ಆ ಇಲಾಖೆಯ ಸಿಬ್ಬಂದಿ ವಿಷಯಗಳ ಪ್ರಭಾರದಲ್ಲಿರುವ ಸರ್ಕಾರದ ಅಧೀನ ಕಾರ್ಯದರ್ಶಿ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**(ಪಿ. ಮಾರ್ಕಂಡೇಯ)**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ,

(ಸೇವಾ ನಿಯಮಗಳು– 2).

**ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಡಿಪಿಎಆರ್ 7 ಎಸ್‌ಡಿಇ 2008, ಬೆಂಗಳೂರು, ದಿನಾಂಕ: 10ನೇ ಸೆಪ್ಟೆಂಬರ್, 2009**

ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು, 1957ನ್ನು ಮತ್ತಷ್ಟು ತಿದ್ದುಪಡಿ ಮಾಡಲು ಈ ಮುಂದಿನ ನಿಯಮಗಳ ಕರಡನ್ನು, ಅದರಿಂದ ಬಾಧಿತರಾಗುವ ಸಂಭವವಿರುವ ಎಲ್ಲಾ ವ್ಯಕ್ತಿಗಳಿಂದ, ಸರ್ಕಾರಿ ರಾಜ್ಯಪತ್ರದಲ್ಲಿ ಅದನ್ನು ಪ್ರಕಟಿಸಿದ ದಿನಾಂಕದಿಂದ 15 ದಿನಗಳೊಳಗಾಗಿ ಆಕ್ಷೇಪಣೆಗಳನ್ನು ಮತ್ತು ಸಲಹೆಗಳನ್ನು ಆಹ್ವಾನಿಸಿ, ಕರ್ನಾಟಕ ರಾಜ್ಯ ಸಿವಿಲ್ ಸೇವಾ ಅಧಿನಿಯಮ, 1978 (ಕರ್ನಾಟಕ ಅಧಿನಿಯಮ 1990ರ 14)ರ 3ನೇ ಪ್ರಕರಣದ (2)ನೇ ಉಪಪ್ರಕರಣದ (ಎ) ಖಂಡದ ಮೂಲಕ ಅಗತ್ಯಪಡಿಸಲಾದಂತೆ, ದಿನಾಂಕ 11ನೇ ಜೂನ್ 2009ರ ಕರ್ನಾಟಕ ವಿಶೇಷ ರಾಜ್ಯಪತ್ರದ ಭಾಗ–IVಎ, (ಸಂಖ್ಯೆ 439) ರಲ್ಲಿ ಅಧಿಸೂಚನೆ ಸಂಖ್ಯೆ ಡಿಪಿಎಆರ್ 7 ಎಸ್‌ಡಿಇ 2009, ದಿನಾಂಕ 9ನೇ ಜೂನ್ 2009 ರಲ್ಲಿ ಪ್ರಕಟಿಸಿರುವುದರಿಂದ;

ಸದರಿ ರಾಜ್ಯಪತ್ರವನ್ನು ದಿನಾಂಕ 11.6.2009 ರಂದು ಸಾರ್ವಜನಿಕರಿಗೆ ಲಭ್ಯವಾಗುವಂತೆ ಮಾಡಿರುವುದರಿಂದ;

ಮತ್ತು, ಸದರಿ ಕರಡು ನಿಯಮಗಳ ಬಗ್ಗೆ ಸ್ವೀಕರಿಸಿದ ಆಕ್ಷೇಪಣೆಗಳನ್ನು/ ಸಲಹೆಗಳನ್ನು ರಾಜ್ಯ ಸರ್ಕಾರವು ಪರಿಗಣಿಸಿರುವುದರಿಂದ;

ಈಗ, ಕರ್ನಾಟಕ ರಾಜ್ಯ ಸಿವಿಲ್ ಸೇವಾ ಅಧಿನಿಯಮ, 1978 (ಕರ್ನಾಟಕ ಅಧಿನಿಯಮ 1990ರ 14)ರ 8ನೇ ಪ್ರಕರಣದೊಂದಿಗೆ ಓದಿಕೊಂಡ 3ನೇ ಪ್ರಕರಣದ (1)ನೇ ಉಪಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಈ ಮೂಲಕ ಈ ಮುಂದಿನ ನಿಯಮಗಳನ್ನು ರಚಿಸುತ್ತದೆ, ಎಂದರೆ:–

**1. ಹೆಸರು ಮತ್ತು ಪ್ರಾರಂಭ.**– ಈ ನಿಯಮಗಳನ್ನು ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) (31ನೇ ತಿದ್ದುಪಡಿ) ನಿಯಮಗಳು, 2009 ಎಂದು ಕರೆಯತಕ್ಕದ್ದು.

(2) ಅವು ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ ಜಾರಿಗೆ ಬರತಕ್ಕದ್ದು.

**2. ಅನುಸೂಚಿ Iರ ತಿದ್ದುಪಡಿ.**– ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು, 1957ರ (ಇಲ್ಲಿ ಇನ್ನುಮುಂದೆ ಸದರಿ ನಿಯಮಗಳು ಎಂದು ಉಲ್ಲೇಖಿಸಲಾಗಿದೆ) ಅನುಸೂಚಿ I ರಲ್ಲಿ ಕ್ರಮಸಂಖ್ಯೆ: 39ನೇ ನಮೂದಿನ ನಂತರ ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

**"40. ಅಂಗವಿಕಲರ ಮತ್ತು ಹಿರಿಯ ನಾಗರಿಕರ ಕಲ್ಯಾಣ ಇಲಾಖೆ'**

**3. ಅನುಸೂಚಿ IIರ ತಿದ್ದುಪಡಿ.**– ಸದರಿ ನಿಯಮಗಳ ಅನುಸೂಚಿ II ರಲ್ಲಿ **"ಸಮಾಜ ಕಲ್ಯಾಣ ಇಲಾಖೆ"** ಶೀರ್ಷಿಕೆ ಅಡಿಯಲ್ಲಿನ ನಮೂದಿನ ತರುವಾಯ ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

**ಅಂಗವಿಕಲರ ಮತ್ತು ಹಿರಿಯ ನಾಗರಿಕರ ಕಲ್ಯಾಣ ಇಲಾಖೆ**

| ಹುದ್ದೆಗಳ ವರ್ಗ | ನೇಮಕ ಮಾಡಲು ಅಧಿಕಾರವುಳ್ಳ ಪ್ರಾಧಿಕಾರಿ | ದಂಡನೆಗಳನ್ನು ವಿಧಿಸಲು ಅಧಿಕಾರವುಳ್ಳ ಪ್ರಾಧಿಕಾರಿ ಮತ್ತು ಅವರು ವಿಧಿಸಬಹುದಾದ ದಂಡನೆಗಳು | | ಅಪೀಲು ಪ್ರಾಧಿಕಾರಿ |
|---|---|---|---|---|
| | | ಪ್ರಾಧಿಕಾರಿ | ದಂಡನೆಗಳು | |
| 1 | 2 | 3 | 4 | 5 |
| | | ಪ್ರಧಾನ ಕಚೇರಿ, ಬೆಂಗಳೂರು | | |
| ಅಧೀಕ್ಷಕರು (ನಾನ್‌ಗೆಜೆಟೆಡ್), ಪ್ರಥಮ ದರ್ಜೆ ಸಹಾಯಕರು, ಶೀಘ್ರಲಿಪಿಗಾರರು | ನಿರ್ದೇಶಕರು | ಉಪ ನಿರ್ದೇಶಕರು | (ii) ರಿಂದ (ivಎ)ವರೆಗೆ | ನಿರ್ದೇಶಕರು |
| | | ನಿರ್ದೇಶಕರು | (v) ರಿಂದ (viii)ರವರೆಗೆ | ಸರ್ಕಾರ |
| ದ್ವಿತೀಯ ದರ್ಜೆ ಸಹಾಯಕರು, ವಾಹನ ಚಾಲಕರು, ಬೆರಳಚ್ಚುಗಾರರು | ಉಪ ನಿರ್ದೇಶಕರು | ಸಹಾಯಕ ನಿರ್ದೇಶಕರು | (ii) ರಿಂದ (ivಎ)ವರೆಗೆ | ಉಪ ನಿರ್ದೇಶಕರು |
| | | ಉಪ ನಿರ್ದೇಶಕರು | (v) ರಿಂದ (viii)ರವರೆಗೆ | ನಿರ್ದೇಶಕರು |

ಜಿಲ್ಲಾ ಕಚೇರಿಗಳು

| | | | | |
|---|---|---|---|---|
| ಅಧೀಕ್ಷಕರು (ನಾನ್‌ಗೆಜೆಟೆಡ್), ಪದವೀಧರ ಸಹಾಯಕರು, ಓರಿಯಂಟೇಷನ್ ಮತ್ತು ಮೊಬಿಲಿಟಿ ಇನ್‌ಸ್ಟ್ರಕ್ಟರ್ ಗ್ರೇಡ್– I, ಸ್ಪೀಚ್ ಥೆರೆಫಿಸ್ಟ್, ಸಂಗೀತ ಶಿಕ್ಷಕರು– ಗ್ರೇಡ್ I, ಪ್ರಥಮ ದರ್ಜೆ ಸಹಾಯಕರು, ಪ್ರೋಗ್ರಾಂ ಅಸಿಸ್ಟೆಂಟ್, ಅಕ್ಯುಪೇಷನಲ್ ಥೆರಪಿಸ್ಟ್, ಫಿಸಿಯೋ ಥೆರಪಿಸ್ಟ್, ಸ್ಟೀರಿಯೋ ಆಪರೇಟರ್, ಕಾಪಿ ಎಡಿಟರ್ | ನಿರ್ದೇಶಕರು | ಉಪ ನಿರ್ದೇಶಕರು (ಪ್ರಧಾನ ಕಚೇರಿ) | (ii) ರಿಂದ (ivಎ)ವರೆಗೆ | ನಿರ್ದೇಶಕರು |
| | | ನಿರ್ದೇಶಕರು | (v) ರಿಂದ (viii)ರವರೆಗೆ | ಸರ್ಕಾರ |
| ದ್ವಿತೀಯ ದರ್ಜೆ ಸಹಾಯಕರು, ಸಂಗೀತ ಶಿಕ್ಷಕರು– ಗ್ರೇಡ್ II ಮತ್ತು ಗ್ರೇಡ್ III, ಕ್ರಾಫ್ಟ್ ಇನ್‌ಸ್ಟ್ರಕ್ಟರ್, (ಬಂಬೂ ಮತ್ತು ಕೇನ್ ಇನ್‌ಸ್ಟ್ರಕ್ಟರ್, ಫುಟ್‌ರಗ್ ಇನ್‌ಸ್ಟ್ರಕ್ಟರ್, ಮ್ಯಾಟ್ ಮೇಕಿಂಗ್ ಇನ್‌ಸ್ಟ್ರಕ್ಟರ್, ನೇಯ್ಗೆ ಬೋಧಕರು, ಹೊಲಿಗೆ ಶಿಕ್ಷಕರು), ಓರಿಯಂಟೇಷನ್ ಮತ್ತು ಮೊಬಿಲಿಟಿ ಇನ್‌ಸ್ಟ್ರಕ್ಟರ್ ಗ್ರೇಡ್ – II, ದೈಹಿಕ ಶಿಕ್ಷಣ ಶಿಕ್ಷಕರು, ಎಎನ್‌ಎಮ್ ವಾರ್ಡನ್, ಮೇಟ್ರನ್, ಉಗ್ರಾಣ ಪಾಲಕರು, ಬೆರಳಚ್ಚುಗಾರರು, ಪ್ರೂಪ್ ರೀಡರ್, ಪ್ರೂಪ್ ಪ್ರೆಸ್‌ಮೆನ್, ಕಾಪಿ ಹೋಲ್ಡರ್, ಪ್ರಿಂಟರ್, ಮೆಕ್ಯಾನಿಕ್ ಮತ್ತು ಬೈಂಡರ್ | ಉಪ ನಿರ್ದೇಶಕರು (ಪ್ರಧಾನ ಕಚೇರಿ) | ಸಹಾಯಕ ನಿರ್ದೇಶಕರು (ಪ್ರಧಾನ ಕಚೇರಿ) | (ii) ರಿಂದ (ivಎ)ವರೆಗೆ | ಉಪನಿರ್ದೇಶಕರು (ಪ್ರಧಾನ ಕಚೇರಿ) |
| | | ಉಪ ನಿರ್ದೇಶಕರು (ಪ್ರಧಾನ ಕಚೇರಿ) | (v) ರಿಂದ (viii)ರವರೆಗೆ | ನಿರ್ದೇಶಕರು |

4. **ಅನುಸೂಚಿ IIIರ ತಿದ್ದುಪಡಿ.–** ಸದರಿ ನಿಯಮಗಳ ಅನುಸೂಚಿ III ರಲ್ಲಿ **"ಸಮಾಜ ಕಲ್ಯಾಣ ಇಲಾಖೆ"** ಶೀರ್ಷಿಕೆ ಅಡಿಯಲ್ಲಿನ ನಮೂದುಗಳ ನಂತರ ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

| **ಅಂಗವಿಕಲರ ಮತ್ತು ಹಿರಿಯ ನಾಗರಿಕರ ಕಲ್ಯಾಣ ಇಲಾಖೆ** | | | | |
|---|---|---|---|---|
| **ಹುದ್ದೆಗಳ ವರ್ಗ** | **ನೇಮಕ ಮಾಡಲು ಅಧಿಕಾರವುಳ್ಳ ಪ್ರಾಧಿಕಾರಿ** | **ದಂಡನೆಗಳನ್ನು ವಿಧಿಸಲು ಅಧಿಕಾರವುಳ್ಳ ಪ್ರಾಧಿಕಾರಿ ಮತ್ತು ಅವರು ವಿಧಿಸಬಹುದಾದ ದಂಡನೆಗಳು** | | **ಅಪೀಲು ಪ್ರಾಧಿಕಾರಿ** |
| | | **ಪ್ರಾಧಿಕಾರಿ** | **ದಂಡನೆಗಳು** | |
| **1** | **2** | **3** | **4** | **5** |
| **ಪ್ರಧಾನ ಕಚೇರಿ** | | | | |
| ಸಮೂಹ 'ಡಿ' ಹುದ್ದೆಗಳು | ಉಪ ನಿರ್ದೇಶಕರು | ಸಹಾಯಕ ನಿರ್ದೇಶಕರು | (i) ರಿಂದ (ivಎ)ವರೆಗೆ | ಉಪ ನಿರ್ದೇಶಕರು (ಪ್ರಧಾನ ಕಚೇರಿ) |
| | | ಉಪ ನಿರ್ದೇಶಕರು | (v) ರಿಂದ (viii)ರವರೆಗೆ | ನಿರ್ದೇಶಕರು |
| | | | | |

ಜಿಲ್ಲಾ ಕಚೇರಿಗಳು

| | | | | |
|---|---|---|---|---|
| ಜವಾನರು, ಕಾವಲುಗಾರರು, ಅಡಿಗೆಯವರು, ಸಹಾಯಕ ಅಡಿಗೆಯವರು, ಆಯಾಗಳು, ಸೈಕಲ್ ಅರ್ಡರ್‌ಲೀಗಳು, ಸಹಾಯಕರು, ಕಸ ಗುಡಿಸುವವರು, ಸ್ಯಾನಿಟರಿ ವರ್ಕರ್ಸ್ | ಉಪನಿರ್ದೇಶಕರು (ಪ್ರಧಾನ ಕಚೇರಿ) | ಸಹಾಯಕ ನಿರ್ದೇಶಕರು (ಪ್ರಧಾನ ಕಚೇರಿ)<br>ಉಪ ನಿರ್ದೇಶಕರು (ಪ್ರಧಾನ ಕಚೇರಿ) | (i) ರಿಂದ (ivಎ)ವರೆಗೆ<br>(v) ರಿಂದ (viii) ರವರೆಗೆ | ಉಪನಿರ್ದೇಶಕರು (ಪ್ರಧಾನ ಕಚೇರಿ)<br>ನಿರ್ದೇಶಕರು |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**(ಪಿ. ಮಾರ್ಕಂಡೇಯ)**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ, (ಸೇವಾ ನಿಯಮಗಳು– 2).

**ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ**

**ಅಧಿಸೂಚನೆ**

**ಸಂ. ಸಿಆಸುಇ: 23: ಸೇಇವಿ: 2009, ಬೆಂಗಳೂರು, ದಿನಾಂಕ: 2ನೇ ಡಿಸೆಂಬರ್, 2009**

ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು, 1957ನ್ನು ಮತ್ತಷ್ಟು ತಿದ್ದುಪಡಿ ಮಾಡಲು ಈ ಮುಂದಿನ ನಿಯಮಗಳ ಕರಡನ್ನು, ಅದರಿಂದ ಬಾಧಿತರಾಗುವ ಸಂಭವವಿರುವ ಎಲ್ಲಾ ವ್ಯಕ್ತಿಗಳಿಂದ, ಸರ್ಕಾರಿ ರಾಜ್ಯಪತ್ರದಲ್ಲಿ ಅದನ್ನು ಪ್ರಕಟಿಸಿದ ದಿನಾಂಕದಿಂದ 15 ದಿನಗಳೊಳಗಾಗಿ ಆಕ್ಷೇಪಣೆಗಳನ್ನು ಮತ್ತು ಸಲಹೆಗಳನ್ನು ಆಹ್ವಾನಿಸಿ, ಕರ್ನಾಟಕ ರಾಜ್ಯ ಸಿವಿಲ್ ಸೇವಾ ಅಧಿನಿಯಮ, 1978 (ಕರ್ನಾಟಕ ಅಧಿನಿಯಮ 1990ರ 14)ರ 3ನೇ ಪ್ರಕರಣದ (2)ನೇ ಉಪಪ್ರಕರಣದ (ಎ) ಖಂಡದ ಮೂಲಕ ಅಗತ್ಯಪಡಿಸಲಾದಂತೆ, ದಿನಾಂಕ 20ನೇ ಅಕ್ಟೋಬರ್ 2009ರ ಕರ್ನಾಟಕ ವಿಶೇಷ ರಾಜ್ಯಪತ್ರದ ಭಾಗ–IVಎ (ಸಂಖ್ಯೆ 957) ರಲ್ಲಿ ಅಧಿಸೂಚನೆ ಸಂಖ್ಯೆ ಡಿಪಿಎಆರ್ 23 ಎಸ್‌ಡಿಇ 2009, ದಿನಾಂಕ 20ನೇ ಅಕ್ಟೋಬರ್ 2009 ರಲ್ಲಿ ಪ್ರಕಟಿಸಿರುವುದರಿಂದ;

ಸದರಿ ರಾಜ್ಯಪತ್ರವನ್ನು ದಿನಾಂಕ: 20.10.2009 ರಂದು ಸಾರ್ವಜನಿಕರಿಗೆ ಲಭ್ಯವಾಗುವಂತೆ ಮಾಡಿರುವುದರಿಂದ;

ಮತ್ತು ಸದರಿ ಕರಡಿನ ಬಗ್ಗೆ ರಾಜ್ಯ ಸರ್ಕಾರಕ್ಕೆ ಯಾವುವೇ ಆಕ್ಷೇಪಣೆಗಳು ಮತ್ತು ಸಲಹೆಗಳು ಬಾರದಿರುವುದರಿಂದ;

ಈಗ, ಕರ್ನಾಟಕ ರಾಜ್ಯ ಸಿವಿಲ್ ಸೇವಾ ಅಧಿನಿಯಮ, 1978 (1990ರ ಕರ್ನಾಟಕ ಅಧಿನಿಯಮ 14)ರ 8ನೇ ಪ್ರಕರಣದೊಂದಿಗೆ ಓದಿಕೊಂಡ 3ನೇ ಪ್ರಕರಣದ (1)ನೇ ಉಪಪ್ರಕರಣದಿಂದ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಈ ಮೂಲಕ ಈ ಮುಂದಿನ ನಿಯಮಗಳನ್ನು ರಚಿಸುತ್ತದೆ, ಎಂದರೆ:–

**ನಿಯಮಗಳು**

**1. ಹೆಸರು ಮತ್ತು ಪ್ರಾರಂಭ.**– (1) ಈ ನಿಯಮಗಳನ್ನು ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) (ತಿದ್ದುಪಡಿ) ನಿಯಮಗಳು, 2009 ಎಂದು ಕರೆಯತಕ್ಕದ್ದು.

(2) ಅವು ಸರ್ಕಾರಿ ರಾಜ್ಯಪತ್ರದಲ್ಲಿ ಅವುಗಳನ್ನು ಪ್ರಕಟಿಸಿದ ದಿನಾಂಕದಿಂದ ಜಾರಿಗೆ ಬರತಕ್ಕದ್ದು.

**2. 10ನೇ ನಿಯಮದ ತಿದ್ದುಪಡಿ.**– ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು, 1957ರ 10ನೇ ನಿಯಮದ (6)ನೇ ಉಪನಿಯಮದಲ್ಲಿ, "ಆ ಪ್ರಕರಣವನ್ನು ಅದು ಸೂಕ್ತವೆಂದು ಭಾವಿಸುವಂಥ ಆದೇಶಗಳಿಗಾಗಿ ಸರ್ಕಾರಕ್ಕೆ ವರದಿ ಮಾಡತಕ್ಕದ್ದು" ಎಂಬ ಪದಗಳಿಗೆ ಬದಲಾಗಿ "ನೇಮಕಾತಿ ಪ್ರಾಧಿಕಾರವು ಆ ಪ್ರಕರಣವನ್ನು ಪರಿಶೀಲಿಸತಕ್ಕದ್ದು ಮತ್ತು ಸರ್ಕಾರಿ ನೌಕರರನ್ನು ಅಮಾನತ್ತಿನಲ್ಲಿರಿಸಿರುವುದನ್ನು ಮುಂದುವರೆಸಬೇಕೆ ಅಥವಾ ಬೇಡವೇ ಎಂಬ ಬಗ್ಗೆ ತಾನು ಸೂಕ್ತವೆಂದು ಭಾವಿಸಬಹುದಾದಂತೆ ತೀರ್ಮಾನವನ್ನು ತೆಗೆದುಕೊಳ್ಳತಕ್ಕದ್ದು" ಎಂಬ ಪದಗಳನ್ನು ಸೇರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಪಿ. ಮಾರ್ಕಂಡೇಯ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ,
(ಸೇವಾ ನಿಯಮಗಳು– 2).

The above translation of the Karnataka Civil Services (Classification, Control and Appeal) Rules, 1957 shall be authoritative text in the Kannada Language under section 5A of the Karnataka Official Language Act, 1963.

GOVERNOR OF KARNATAKA

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 851

**ಜಿ.ಕೆ. ಬೋರೇಗೌಡ**
ಸರ್ಕಾರದ ಕಾರ್ಯದರ್ಶಿ,
ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ.

**ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ**

**ಅಧಿಸೂಚನೆ ಸಂಖ್ಯೆ: ವಿಯಇ 51 ವಿತ್ರಮ 2008, ಬೆಂಗಳೂರು, ದಿನಾಂಕ:15ನೇ ಅಕ್ಟೋಬರ್, 2010**

ಸರ್ಕಾರಿ ಆದೇಶ ಸಂಖ್ಯೆ: ವಿಯಇ 51 ವಿತ್ರಮ 2008 ದಿನಾಂಕ:14.10.2008ರಲ್ಲಿ ಪ್ರೊ.ಸಿ.ಎನ್.ಆರ್.ರಾವ್ ಅಧ್ಯಕ್ಷರು, ಮಾನ್ಯ ಪ್ರಧಾನ ಮಂತ್ರಿಗಳ ವಿಜ್ಞಾನ ಸಲಹಾ ಪರಿಷತ್ತು, ಭಾರತ ಸರ್ಕಾರ, ನ್ಯಾಷನಲ್ ರೀಸರ್ಚ್ ಪ್ರೊಫೆಸರ್ ಮತ್ತು ಗೌರವ ಅಧ್ಯಕ್ಷರು, ಜವಾಹರಲಾಲ್ ನೆಹರೂ ವಿಜ್ಞಾನ ಸಂಶೋಧನಾ ಕೇಂದ್ರ, ಜಕ್ಕೂರು, ಬೆಂಗಳೂರು ಇವರ ಅಧ್ಯಕ್ಷತೆಯಲ್ಲಿ 15 ಸದಸ್ಯರನ್ನೊಳಗೊಂಡಂತೆ ರಚಿಸಲಾದ ವಿಜ್ಞಾನ ಮತ್ತು ತಂತ್ರಜ್ಞಾನ ದಾರ್ಶನಿಕ ಸಮೂಹಕ್ಕೆ ಬೆಳಗಾವಿಯ ವಿಶ್ವೇಶ್ವರಯ್ಯ ತಾಂತ್ರಿಕ ವಿಶ್ವವಿದ್ಯಾನಿಲಯದ ಕುಲಪತಿಗಳಾದ ಪ್ರೊ:ಹೆಚ್.ಬಿ. ಕಿಂಚ ಇವರನ್ನು ಸದಸ್ಯರನ್ನಾಗಿ ನಾಮನಿರ್ದೇಶನ ಮಾಡಲಾಗಿತ್ತು.

ಪ್ರೊ: ಹೆಚ್.ಬಿ. ಕಿಂಚ, ಕುಲಪತಿಗಳು, ವಿಶ್ವೇಶ್ವರಯ್ಯ ತಾಂತ್ರಿಕ ವಿಶ್ವವಿದ್ಯಾನಿಲಯ, ಬೆಳಗಾವಿ ಇವರು ದಿನಾಂಕ:30.06.2010ರಂದು ಸೇವೆಯಿಂದ ನಿವೃತ್ತಿಹೊಂದಿರುವುದರಿಂದ, ಇವರ ಅಧಿಕಾರದ ಅವಧಿಯು ದಿನಾಂಕ:30.06.2010ಕ್ಕೆ ಅಂತ್ಯಗೊಂಡಿದ್ದು, ಇವರ ಬದಲಿಗೆ ಬೆಳಗಾವಿಯ ವಿಶ್ವೇಶ್ವರಯ್ಯ ತಾಂತ್ರಿಕ ವಿಶ್ವವಿದ್ಯಾನಿಲಯದ ಕುಲಪತಿಗಳಾದ ಪ್ರೊ: ಎಚ್. ಮಹೇಶಪ್ಪ ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ವಿಜ್ಞಾನ ಮತ್ತು ತಂತ್ರಜ್ಞಾನ ದಾರ್ಶನಿಕ ಸಮೂಹದ ಸದಸ್ಯರನ್ನಾಗಿ ನೇಮಿಸಿ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಬೋರಲಿಂಗಯ್ಯ**

ಪಿ.ಆರ್.898

ಸರ್ಕಾರದ ಅಧೀನ ಕಾರ್ಯದರ್ಶಿ,

ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ.

**ಆರ್ಥಿಕ ಸಚಿವಾಲಯ**

**ತಿದ್ದುಪಡಿ ಆದೇಶ ಸಂಖ್ಯೆ: ಆಇ 829 ವೆಚ್ಚ–12/10, ಬೆಂಗಳೂರು, ದಿನಾಂಕ:13ನೇ ಅಕ್ಟೋಬರ್, 2010**

ಸರ್ಕಾರಿ ಅಧಿಸೂಚನೆ ಸಂಖ್ಯೆ: ಆಇ 311 ವೆಚ್ಚ–12/2010, ದಿನಾಂಕ:29.04.2010ರಲ್ಲಿನ 6ನೇ ಸಾಲಿನಲ್ಲಿ ನಮೂದಿಸಲಾಗಿರುವ "ವಸತಿ ಇಲಾಖೆಗೆ" ಎಂಬ ಪದವನ್ನು ಕೈಬಿಟ್ಟು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್. ಶೇಖರಪ್ಪ**

ಪಿ.ಆರ್.901

ಸರ್ಕಾರದ ಅಧೀನ ಕಾರ್ಯದರ್ಶಿ,

ಆರ್ಥಿಕ ಇಲಾಖೆ (ಸಂಗ್ರಹಣಾ ಕೋಶ)

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ಅಧಿಸೂಚನೆ ಸಂಖ್ಯೆ: ಸಿಆಸುಇ 19 ಸೇಲೋಸೇ. 2010 (ಭಾಗ), ಬೆಂಗಳೂರು, ದಿನಾಂಕ:20ನೇ ಅಕ್ಟೋಬರ್, 2010**

ಕರ್ನಾಟಕ ರಾಜ್ಯಪಾಲನಾದ ನಾನು, ಹೆಚ್.ಆರ್. ಭಾರದ್ವಾಜ್, ಭಾರತ ಸಂವಿಧಾನದ ಅನುಚ್ಛೇದ 316ರ ಖಂಡ (1)ರಲ್ಲಿ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಶ್ರೀ ಹೆಚ್.ವಿ. ಪಾರ್ಶ್ವನಾಥ್ ಇವರನ್ನು ದಿನಾಂಕ:05.06.2010ರಂದು ನಿವೃತ್ತಿ ಹೊಂದಿದ ಶ್ರೀ ರಿಯಾಜ್ ಅಹಮದ್ ಇವರ ಸ್ಥಾನದಲ್ಲಿ ಕರ್ನಾಟಕ ಲೋಕಸೇವಾ ಆಯೋಗದ ಸದಸ್ಯರನ್ನಾಗಿ ನೇಮಿಸಿರುತ್ತೇನೆ.

ಕರ್ನಾಟಕ ರಾಜ್ಯಪಾಲರು

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಡಿ. ನಾಗೇಶ್ ಪಾಟಕ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ. (ಸೇವಾ ನಿಯಮಗಳು–1).

**PERSONNEL AND ADMINISTRATIVE REFORMS SECRETARIAT**

**NOTIFICATION**

**No.DPAR 19 SSC 2010 (P), Bangalore, Dated:20th October, 2010**

In exercise of the powers conferred by clause (1) of Article 316 of the Constitution of India, I, H.R. Bhardwaj, Governor of Karnataka, hereby appoint Shri H.V. Parshwanath, I.A.S., as Member, Karnataka Public Service Commission in place of Sri. Riyaz Ahmed retired on 05.06.2010.

GOVERNOR OF KARNATAKA

By Order and in the name of the Governor of Karnataka,

PR-899

**D. NAGESH PATAK**

Under Secretary to Government,

Department of Personnel and Administrative Reforms. (Service Rules-1)

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಸಿಆಸುಇ 2 ಇಸಂಗ್ರ 2010(1), ಬೆಂಗಳೂರು, ದಿನಾಂಕ:24ನೇ ಆಗಸ್ಟ್, 2010**

ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ, 1999ರ ಕಲಂ 18–ಎ ರ ಉಪಕಲಂ (2) ರನ್ವಯ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಬಾಗಲಕೋಟೆ ಪಟ್ಟಣ ಅಭಿವೃದ್ಧಿ ಪ್ರಾಧಿಕಾರ, ಬಾಗಲಕೋಟೆ, ಇದರ ಎಲ್ಲಾ ಸಂಗ್ರಹಣೆಗಳನ್ನು ಈ ತಕ್ಷಣದಿಂದ ಜಾರಿಗೆ ಬರುವಂತೆ, ವಿದ್ಯುನ್ಮಾನ ಸಂಗ್ರಹಣೆ ವೇದಿಕೆ ಮೂಲಕ (through e-Procurement platform) ಸಂಗ್ರಹಿಸತಕ್ಕದ್ದೆಂದು ಕರ್ನಾಟಕ ಸರ್ಕಾರ, ಈ ಮೂಲಕ ಗೊತ್ತುಪಡಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಲಲಿತಾ ಹಾ. ಹಂದಿಗೋಳ**

ಪೀಠಾಧಿಕಾರಿ–1, (ಇ–ಆಡಳಿತ),

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ.

**PERSONNEL AND ADMINISTRATIVE REFORMS SECRETARIAT**

**NOTIFICATION**

**No.DPAR 2 EPR 2010(1), Bangalore, Dated:24th August, 2010**

In exercise of the powers conferred by sub-section (2) of section 18A of the Karnataka Transparency in Public Procurements Act, 1999 (Karnataka Act 29 of 2000), the Government of Karnataka hereby specify that the Bagalkot City Development Authority., Bagalkot, shall, with immediate effect, procure all its procurements through e-Procurement platform.

By Order and in the name of the Governor of Karnataka,

**LALITHA H. HANDIGOL**

PR-902

Desk Officer-1, (e-Governance)

Dept. of Personnel and Administrative Reforms.

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಸಿಆಸುಇ 2 ಇಸಂಗ್ರ 2010(2), ಬೆಂಗಳೂರು, ದಿನಾಂಕ:24ನೇ ಆಗಸ್ಟ್, 2010**

ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ, 1999ರ ಕಲಂ 18–ಎ ರ ಉಪಕಲಂ (2) ರನ್ವಯ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಮುದ್ರಣ, ಲೇಖನಾ ಸಾಮಗ್ರಿ ಮತ್ತು ಪ್ರಕಟಣೆಗಳ ನಿರ್ದೇಶನಾಲಯ, ಬೆಂಗಳೂರು, ಇದರ ಎಲ್ಲಾ ಸಂಗ್ರಹಣೆಗಳನ್ನು ಈ ತಕ್ಷಣದಿಂದ ಜಾರಿಗೆ ಬರುವಂತೆ, ವಿದ್ಯುನ್ಮಾನ ಸಂಗ್ರಹಣೆ ವೇದಿಕೆ ಮೂಲಕ (through e-Procurement platform) ಸಂಗ್ರಹಿಸತಕ್ಕದ್ದೆಂದು ಕರ್ನಾಟಕ ಸರ್ಕಾರ, ಈ ಮೂಲಕ ಗೊತ್ತುಪಡಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಲಲಿತಾ ಹಾ. ಹಂದಿಗೋಳ**

ಪೀಠಾಧಿಕಾರಿ–1, (ಇ–ಆಡಳಿತ),

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ.

**PERSONNEL AND ADMINISTRATIVE REFORMS SECRETARIAT**

**NOTIFICATION**

**No.DPAR 2 EPR 2010(2), Bangalore, Dated:24th August, 2010**

In exercise of the powers conferred by sub-section (2) of section 18A of the Karnataka Transparency in Public Procurements Act, 1999 (Karnataka Act 29 of 2000), the Government of Karnataka hereby specify that the Department of Printing, Stationery and Publications, Bengaluru, shall, with immediate effect, procure all its procurements through e-Procurement platform.

By Order and in the name of the Governor of Karnataka,

**LALITHA H. HANDIGOL**

PR-903

Desk Officer-1, (e-Governance)

Dept. of Personnel and Administrative Reforms.

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಸಿಆಸುಇ 2 ಇಸಂಗ್ರ 2010 (3), ಬೆಂಗಳೂರು, ದಿನಾಂಕ:24ನೇ ಆಗಸ್ಟ್, 2010**

ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ, 1999ರ ಕಲಂ 18–ಎರ ಉಪಕಲಂ (2) ರನ್ವಯ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಪಂಚಾಯತ್ ರಾಜ್ ಇಂಜಿನಿಯರಿಂಗ್ ಇಲಾಖೆ, ಬೆಂಗಳೂರು, ಇದರ ಎಲ್ಲಾ ಸಂಗ್ರಹಣೆಗಳನ್ನು ಈ ತಕ್ಷಣದಿಂದ ಜಾರಿಗೆ ಬರುವಂತೆ, ವಿದ್ಯುನ್ಮಾನ ಸಂಗ್ರಹಣೆ ವೇದಿಕೆ ಮೂಲಕ (through e-Procurement platform) ಸಂಗ್ರಹಿಸತಕ್ಕದ್ದೆಂದು ಕರ್ನಾಟಕ ಸರ್ಕಾರ, ಈ ಮೂಲಕ ಗೊತ್ತುಪಡಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಲಲಿತಾ ಹಾ. ಹಂದಿಗೋಳ**

ಪೀಠಾಧಿಕಾರಿ–1, (ಇ–ಆಡಳಿತ),

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ.

**PERSONNEL AND ADMINISTRATIVE REFORMS SECRETARIAT**

**NOTIFICATION**

**No.DPAR 2 EPR 2010 (3), Bangalore, Dated:24th August, 2010**

In exercise of the powers conferred by sub-section (2) of section 18A of the Karnataka Transparency in Public Procurements Act, 1999 (Karnataka Act 29 of 2000), the Government of Karnataka hereby specify that the Department of Panchayat Raj Engineering, Bengaluru, shall, with immediate effect, procure all its procurements through e-Procurement platform.

By Order and in the name of the Governor of Karnataka,

**LALITHA. H. HANDIGOL**

PR-904

Desk Officer-1, (e-Governance)

Dept. of Personnel and Administrative Reforms.

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ತಿದ್ದೋಲೆ**

**ಸಂಖ್ಯೆ: ಸಿಆಸುಇ 3 ಇಸಂಗ್ರ 2010 (1), ಬೆಂಗಳೂರು, ದಿನಾಂಕ:28ನೇ ಆಗಸ್ಟ್, 2010**

ದಿನಾಂಕ:24.08.2010ರ ಅಧಿಸೂಚನೆ ಸಂಖ್ಯೆ: ಸಿಆಸುಇ 2 ಇಸಂಗ್ರ 2010(1)ರ ಸಂಖ್ಯೆಯನ್ನು "ಸಿಆಸುಇ 2 ಇಸಂಗ್ರ 2010(1)"ರ ಬದಲು. "ಸಿಆಸುಇ 3 ಇಸಂಗ್ರ 2010(1)" ಎಂದು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಲಲಿತಾ ಹಾ. ಹಂದಿಗೋಳ**

ಪೀಠಾಧಿಕಾರಿ–1, (ಇ–ಆಡಳಿತ),

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ.

**PERSONNEL AND ADMINISTRATIVE REFORMS SECRETARIAT**

**CORRIGENDUM**

**No.DPAR 3 EPR 2010 (1), Bangalore, Dated:28th August, 2010**

The number of the notification, namely, DPAR 2 EPR 2010(1) Dated:24.08.2010 shall be read as "DPAR 3 EPR 2010(1)" instead of "DPAR 2 EPR 2010 (1).

By Order and in the name of the Governor of Karnataka,

**LALITHA H. HANDIGOL**

PR-905

Desk Officer-1, (e-Governance)

Dept. of Personnel and Administrative Reforms.